ಮೈಸೂರು ವಿಶ್ವವಿದ್ಯಾನಿಲಯ

# ಲಲ್ಲ ಯೋಗೀಶ್ವರಿ

ಜೆ. ರುದ್ರಪ್ಪ, ಎಂ.ಎ., ಎಲ್‌ಎಲ್.ಬಿ.





ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೭

ಮೈಸೂರು ವಿಶ್ವವಿದ್ಯಾನಿಲಯ

# ಲಲ್ಲಯೋಗೀಶ್ವರಿ

ಜೆ. ರುದ್ರಪ್ಪ, ಎಂ.ಎ., ಎಲ್ಎಲ್.ಬಿ.



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೭

ಮೊದಲನೆಯ ಮುದ್ರಣ: ೧೯೬೭





ಪ್ರಕಾಶಕರು:
ಡೈರೆಕ್ಟರ್ 'ಪ್ರಸಾರಾಂಗ'
ಮಾನಸಗಂಗೋತ್ರಿ, ಮೈಸೂರು-೬.

ಬೆಲೆ:

| | |
|---|---|
| ಸಾದಾ ಪ್ರತಿ | ರೂ. ೨-೦೦ |
| ಉತ್ತಮ ಪ್ರತಿ | ರೂ. ೩-೦೦ |



ಮುದ್ರಕರು:
ಡೆಪ್ಯೂಟಿ ಡೈರೆಕ್ಟರ್, ಮೈಸೂರು ವಿಶ್ವವಿದ್ಯಾನಿಲಯದ ಮುದ್ರಣಾಲಯ
ಮೈಸೂರು

# ಮುನ್ನುಡಿ

ಭಾರತೀಯ ತತ್ತ್ವಶಾಸ್ತ್ರ ಮತ್ತು ಆಧ್ಯಾತ್ಮಿಕ ಅನುಷ್ಠಾನ ಕ್ರಮಗಳಲ್ಲಿ ಕಾಶ್ಮೀರ ಶೈವ ಸಿದ್ಧಾಂತಕ್ಕೆ ಒಂದು ವಿಶಿಷ್ಟ ಸ್ಥಾನವಿರುವುದು ಎಲ್ಲರಿಗೂ ತಿಳಿದ ವಿಷಯವೆ. ಆದರೆ ಆ ಸಿದ್ಧಾಂತದ ಮೂಲ ಪ್ರಕ್ರಿಯೆಗಳು ಮತ್ತು ಅವುಗಳ ಮೇಲಿನ ಟೀಕೆ ಟಿಪ್ಪಣಿಗಳನ್ನು ಸಮರ್ಥವಾಗಿ ನಿರೂಪಿಸಿರುವ ಗ್ರಂಥಗಳು—ಇಂಗ್ಲಿಷ್ ಭಾಷೆಯಲ್ಲಿ ಕೂಡ—ತೀರ ಕಡಿಮೆ. ಶ್ರೀಮಾನ್ ಜೆ. ರುದ್ರಪ್ಪನವರು ತಮ್ಮ ಸಂತತವಾದ ವಿದ್ವತ್ಸಾಧನೆ ಮತ್ತು ಪ್ರಗಾಢ ಪರಿಶ್ರಮಗಳಿಂದ ಈ ಅಮೂಲ್ಯ ಶಾಸ್ತ್ರ ಶಾಖೆಯನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟಿದ್ದಾರೆ. ಅವರ "ಪ್ರತ್ಯಭಿಜ್ಞಾಹೃದಯ" ಮತ್ತು "ಶಿವಸೂತ್ರಗಳು" ಈ ಕ್ಷೇತ್ರದಲ್ಲಿ ಅವರು ಸಲ್ಲಿಸಿರುವ ಸೇವೆಗೆ ಸ್ತುತ್ಯ ಸಾಕ್ಷಿಗಳಾಗಿವೆ.

ತಮ್ಮ ಸೇವಾವಧಿಯಲ್ಲಿ ನ್ಯಾಯಮೂರ್ತಿಗಳಾಗಿ ಹಗಲಿರುಳೂ ದುಡಿದ ಶ್ರೀಯುತರು ತತ್ತ್ವಶಾಸ್ತ್ರಕ್ಕೆ, ಅದರಲ್ಲೂ ಕನ್ನಡದಲ್ಲಿ ಅದರ ವ್ಯಾಖ್ಯಾನಕ್ಕೆ, ಇಷ್ಟು ಅವಿಶ್ರಾಂತವಾಗಿ ಸೇವೆ ಸಲ್ಲಿಸುತ್ತಿರುವುದು ಅಭಿನಂದನೀಯ ಸಂಗತಿ. ಆ ದಾರಿಯಲ್ಲಿಯೆ ಮುಂದುವರಿದು ಶ್ರೀ ರುದ್ರಪ್ಪನವರು ಕಾಶ್ಮೀರದ ಪ್ರಮುಖ ಅನುಭಾವಿ ಲಲ್ಲಯೋಗೀಶ್ವರಿಯ ಸೂತ್ರಗಳನ್ನು ಸಮರ್ಪಕವಾಗಿ ಅನುವಾದಿಸಿ, ತುಂಬ ಉಪಯುಕ್ತವಾದ ಟಿಪ್ಪಣಿಗಳೊಡನೆ ಕನ್ನಡಿಗರಿಗೆ ಈ ಗ್ರಂಥವನ್ನು ನೀಡುತ್ತಿದ್ದಾರೆ. ಅದನ್ನು ಅಧ್ಯಯನಮಾಡುವ ಸಹೃದಯ ಜಿಜ್ಞಾಸುಗಳ ಚಿತ್ಕೋಶ ವಿಕಾಸಗೊಂಡು ಬದುಕು ಶಕ್ತಿಪೂರ್ಣವೂ ಜ್ಯೋತಿರ್ಮಯವೂ ಆಗಲೆಂದು ಹಾರೈಸುತ್ತೇನೆ.

೧೧–೭–೧೯೬೭ ಕುವೆಂಪು

# ಅರಿಕೆ

ಪ್ರಕೃತಿ ಸೌಂದರ್ಯಕ್ಕಾಗರವಾದ ಕಾಶ್ಮೀರವು ಹಿಂದಿನ ಕಾಲದಲ್ಲಿ ವಿದ್ಯಾವಂತರಿಗೂ ಧರ್ಮಕ್ಕೂ ಸಂಸ್ಕೃತಿಗೂ ಆಶ್ರಯವಾಗಿತ್ತು. ಸರಸ್ವತಿ ಪೀಠವೆಂದು ಹೆಸರು ಪಡೆದಿತ್ತು. ಅನೇಕ ಸಿದ್ಧಪುರುಷರು ಈ ಪ್ರಾಂತದಲ್ಲಿ ಸಾಧನಾಭ್ಯಾಸಗಳನ್ನು ಮಾಡಿ ಕೃತಾರ್ಥರಾಗಿರುತ್ತಾರೆ. ಅಂಥವರ ಗುಂಪಿನಲ್ಲಿ ಲಲ್ಲೇಶ್ವರಿಯೆಂಬ ಶಿವಯೋಗಿನಿಯು ತತ್ತ್ವಜ್ಞಾನಿಯೂ ಅನುಭಾವಿಯೂ ಆಗಿದ್ದು ದೇಶದಲ್ಲೆಲ್ಲಾ ಸಂಚಾರ ಮಾಡುತ್ತಾ ಸಾಮಾನ್ಯ ಜನರ ಮೇಲೆ ವಿಶೇಷ ಪ್ರಭಾವವನ್ನು ಬೀರಿದ್ದಳು. ತನ್ನ ಸಂಚಾರ ಕಾಲದಲ್ಲಿ ಈಕೆಯು ವಿಶಿಷ್ಟ ರೀತಿಯಲ್ಲಿ ತನ್ನ ಅನುಭವದ ವಿಷಯಗಳನ್ನು ಸಾರಿರುತ್ತಾಳೆ. ಈಕೆಯು ಉಪದೇಶಿಸಿದ ಮಾತುಗಳು 'ಲಲ್ಲವಾಕ್ಯಾನಿ' ಎಂದು ಪ್ರಸಿದ್ಧವಾಗಿವೆ. ಈಕೆಯ ಉದ್ಗಾರಗಳು ಹಲವಾರು ವಿಷಯಗಳನ್ನು ವಿವೇಚಿಸುತ್ತವೆ. ನಮ್ಮ ಮನೋಭಾವನೆಗಳನ್ನು ಹದಮಾಡುವ ಸೂಚನೆಗಳನ್ನೊಳಗೊಂಡಿವೆ. ಮೇಲಾಗಿ ಹೊರಗಿನ ಪ್ರಪಂಚದಲ್ಲಿಯೇ ತೊಳಲುತ್ತಿರುವ ಮಾನವನು ಆಂತರ್ಯತೆಯ ಕಡೆಗೆ ಲಕ್ಷ್ಯಕೊಡುವಂತೆ ಪ್ರೇರಿಸುತ್ತವೆ. ಈ ದೃಷ್ಟಿಯಿಂದ ಲಲ್ಲೇಶ್ವರಿಯ 'ವಾಕ್ಯ'ಗಳು ನಾವು ಅನುಸಂಧಾನ ಮಾಡುವುದಕ್ಕೆ ಯೋಗ್ಯವಾಗಿವೆ.

ಅನುಭಾವಿಗಳ ವಚನಗಳು ವಿಶೇಷ ಪ್ರಚಾರದಲ್ಲಿರುವ ಕರ್ಣಾಟಕದ ವಾಚಕರ ಅವಗಾಹನೆಗಾಗಿ ಯೋಗದ ನೆಲೆಯಿಂದ ಕೂಡಿರುವ ಲಲ್ಲೇಶ್ವರಿಯ ವಚನೋದ್ಗಾರಗಳು ಸ್ಫೂರ್ತಿದಾಯಕವಾಗಿರುತ್ತವೆಂಬ ಉದ್ದೇಶದಿಂದ ಕನ್ನಡಕ್ಕೆ ಭಾಷಾಂತರಿಸಿ ಕನ್ನಡಿಗರ ಮುಂದಿಟ್ಟಿದ್ದೇನೆ.

ಹಿಂದೆ ಪ್ರಬುದ್ಧ ಕರ್ಣಾಟಕದಲ್ಲಿ ಲಲ್ಲೇಶ್ವರಿ ವಾಕ್ಯಗಳಲ್ಲಿ ಕೆಲವು ನನ್ನ ಟಿಪ್ಪಣಿಯೊಡನೆ ಪ್ರಕಟವಾಗಿದ್ದವು. ಈಗ ಹೆಚ್ಚಿನ 'ವಾಕ್ಯ'ಗಳನ್ನು ಸೇರಿಸಿ ವಿಸ್ತೃತವಾದ ಪ್ರಸ್ತಾವನೆಯೊಂದಿಗೆ ವಿವೇಚಿಸಿದ್ದೇನೆ.

ಮೈಸೂರು ವಿಶ್ವವಿದ್ಯಾನಿಲಯದವರು ತಮ್ಮ ಪುಸ್ತಕ ಮಾಲೆಯಲ್ಲಿ 'ಲಲ್ಲವಾಕ್ಯ'ಗಳನ್ನು ಪ್ರಕಟಿಸಿದ್ದಕ್ಕಾಗಿ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಗಾಂಧಿನಗರ, ಬೆಂಗಳೂರು
೨೪-೧-೧೯೬೭

ಜೆ. ರುದ್ರಪ್ಪ

# ವಿಷಯ ಸೂಚಿಕೆ

# ಲಲ್ಲಯೋಗೀಶ್ವರಿ

## ೧. ಅನುಭವದ ಆದರ್ಶಗಳು

ಮನುಷ್ಯನ ಜೀವನದಲ್ಲಿ ಯಾವಾಗಲೂ ಒಂದಲ್ಲ ಒಂದು ರೀತಿ ಘರ್ಷಣೆ ನಡೆಯುತ್ತಲೇ ಇರುತ್ತದೆ. ಈ ಉಬ್ಬರವಿಳಿತಗಳಲ್ಲಿ ಮನಸ್ಸಿಗೆ ಶಾಂತಿ ದೊರೆಯಬೇಕಾದರೆ ಹೊರಗಿನ ಪ್ರಪಂಚಜ್ಞಾನಕ್ಕಿಂತ ಬೇರೆ ಯಾಗಿರುವ ಜ್ಞಾನಬೇಕು. ಇಂತಹ ಜ್ಞಾನವನ್ನುಂಟುಮಾಡುವ ವಿಷಯಗಳನ್ನು ಅನುಭವದಿಂದ ಗುರುತಿಸಬೇಕಾಗುತ್ತದೆ. ಶ್ರದ್ಧೆಯಿಂದ ನಂಬಿ ಅನುಭವಕ್ಕೆ ತಂದುಕೊಳ್ಳಬೇಕಾಗುತ್ತದೆ, ಇದಕ್ಕೆ ಯುಕ್ತಿವಾದ, ಕಾರಣವಾದಗಳು ಅಷ್ಟಾಗಿ ಹೊಂದುವುದಿಲ್ಲ. ಅನುಭವಸಿದ್ಧವಾದ ವಿಷಯಗಳನ್ನು ತಿಳಿಯಪಡಿಸುವುದಕ್ಕೆ ಇದರಲ್ಲಿ ಸಾಕಾದಷ್ಟು ಪಾಂಡಿತ್ಯ ವಿರತಕ್ಕವರು ದೊರೆಯುವುದು ದುರ್ಲಭ. ಒಂದುವೇಳೆ ದೊರೆತರೂ ಅವರಿಗೂ ಸಾಮಾನ್ಯರಿಗೂ ಬಹಳ ಅಂತರ. ಶ್ರೀ ಶಂಕರಾಚಾರ್ಯರೇ ಮೊದಲಾದ ಮಹಾಮಹಿಮರು ಭಾಷ್ಯಗಳನ್ನು ಬರೆದು ತತ್ತ್ವಗಳನ್ನು ಬೋಧಿಸಿರುತ್ತಾರೆ. ಆ ಭಾಷ್ಯಗಳನ್ನು ಓದಿ ತಿಳಿಯುವ ಜನಗಳು ಎಷ್ಟು ಮಂದಿ ಸಿಕ್ಕುತ್ತಾರೆ! ಆದ್ದರಿಂದ ಸಾಮಾನ್ಯ ಜನರಿಗೆ ತಿಳಿಯುವ ಭಾಷೆಯಲ್ಲಿ ಪಾಂಡಿತ್ಯದ ಬಿರುಸಿಲ್ಲದೆ ಮನಮುಟ್ಟುವಂತೆ ಪ್ರಾಕೃತವಾದ ಭಾಷೆಯಿಂದ ತಿಳಿಯಪಡಿಸುವ ಅನುಭಾವಿಗಳ ಗುಂಪೊಂದು ಬೇಕು. ಅನುಭಾವಿಗಳಿಂದ ಸಾಮಾನ್ಯಜನರು ಪ್ರಭಾವಿತರಾಗುವಷ್ಟು ವಿದ್ವಾಂಸರಿಂದ ಆಗುವುದಿಲ್ಲ. ಉದಾಹರಣೆಗೆ ಪುರಂದರದಾಸರ ಪದಗಳು ಶಿವಶರಣರ ವಚನಗಳು ಮನಸ್ಸಿಗೆ ಸುಲಭವಾಗಿ ಹಿಡಿಯುವುದು ಸಾಮಾನ್ಯರಿಗೂ ತಿಳಿದ ವಿಷಯ. 'ಅಂತರಂಗದ ಬಾಗಿಲು ತೆರೆಯಿತು'; 'ನೀನೊಲಿದರೆ ಕೊರಡುಕೊನರುವುದಯ್ಯ'; 'ದಯೆಯಿಲ್ಲದ ಧರ್ಮ ವಾವುದಯ್ಯ'; 'ಎಲ್ಲ ಎಲ್ಲವನರಿದು ಫಲವೇನಯ್ಯ ತನ್ನ ತಾನರಿಯ ಬೇಕಲ್ಲದೆ'; 'ಹಾಲ ಹಿಡಿದು ಬೆಣ್ಣೆಯನರಸಲುಂಟೆ'—ಮೊದಲಾದ ಮಾತುಗಳು ಎಷ್ಟು ಮನೋಜ್ಞವಾಗಿವೆ. ಈ ಕಾರಣದಿಂದ ಅನು

ಭಾವಿಗಳಿಗೆ ಸಮಾಜದಲ್ಲಿ ಒಂದು ವಿಶಿಷ್ಟಸ್ಥಾನವಿದೆ. ಸ್ಥೂಲವಾಗಿ ವಿವೇಚಿಸಿದರೆ ಅನುಭಾವಿಗಳಲ್ಲಿ ಎರಡು ಸಂಗಡಗಳನ್ನು ನಾವು ಕಾಣಬಹುದು. ಪಾಂಡಿತ್ಯವುಳ್ಳವರೂ ಕೂಡ ಅನುಭಾವಿಗಳಾಗಿ ಪರಿಣಮಿಸಿರುತ್ತಾರೆ. ಜನ್ಮಾಂತರ ಸಂಸ್ಕಾರದಿಂದ ಅನುಭಾವಿಗಳಾಗಿರುವವರು ಪಾಂಡಿತ್ಯವನ್ನು ಲೆಕ್ಕಿಸುವುದಿಲ್ಲ.

ಪರಿಪೂರ್ಣ ಬ್ರಹ್ಮಾನುಭವವು ಈ ಜನ್ಮದಲ್ಲಿಯೇ ಉಂಟಾಗಬೇಕೆಂಬುದು ಸಾಧಕರ ಉದ್ದೇಶ. ಇದಕ್ಕೆ ಪೂರ್ವಜನ್ಮ ಸಂಸ್ಕಾರ ಶಿಕ್ಷಣ, ಸತ್ಸಂಗ, ಶಾಸ್ತ್ರಜ್ಞಾನ, ಗುರೂಪದೇಶ, ಸ್ವಪ್ರಯತ್ನಗಳು ಬೇಕು. ಮೇಲಾಗಿ ಶಿವಾನುಗ್ರಹವೂ ಪ್ರಾಪ್ತವಾಗಬೇಕು. ಈ ರೀತಿಯಾದ ಸಾಧನೆ ಮಹಾಸಾಧನೆಯಾದುದರಿಂದ ಒಂದು ಜನ್ಮದಲ್ಲಾಗುವುದು ಕಷ್ಟ. ಜನ್ಮಾಂತರ ಸಂಸ್ಕಾರವಿದ್ದರೆ ಸುಲಭವಾಗಿ ಮುಂದುವರಿಯಬಹುದು. ತತ್ತ್ವಸ್ಥಿತಿ ಹೀಗಿದ್ದರೂ ಅನುಭಾವಿಗಳ ಜೀವನದಲ್ಲಿ ಕೆಲವು ಮಾರ್ಪಾಡುಗಳುಂಟಾಗಿರುವುವೆಂದು ಅವರ ವಾಕ್ಯಗಳಿಂದಲೇ ತಿಳಿಯಬಹುದಾಗಿದೆ. ಈ ಅನುಭಾವಿಗಳು ವಿಶ್ವದ ಎಲ್ಲಾ ಭಾಗಗಳಲ್ಲಿಯೂ ಒಂದಲ್ಲ ಒಂದು ರೀತಿ ಆಗಿ ಹೋಗಿರುತ್ತಾರೆ. ಶಾಸ್ತ್ರೀಯವಾದ ಊಹೆಗಳು ಬೇರೆಯಾಗಿರಬಹುದು. ಅನುಭಾವಿಗಳ ಉಪದೇಶಗಳಲ್ಲಿ ಹಿಂದುಮುಂದು ಸಂಬಂಧಗಳು ಸ್ವಲ್ಪ ವ್ಯತ್ಯಾಸವಾಗಿ ಕಾಣಬಹುದು. ಆದರೆ ಅನುಭಾವಿಗಳ ಅನುಭವವು ಒಂದೇ ರೀತಿಯಾಗಿ ಕೊನೆಗೊಳ್ಳುತ್ತದೆ. ಅಂದರೆ ಈ ಅನುಭವಗಳು ಕುಲ ಜಾತಿ ದೇಶಗಳನ್ನು ಮೀರಿದವುಗಳು. ದಿಕ್ಕಾಲಾತೀತವಾದವುಗಳು. ಅನುಭಾವಿಗಳು ಪ್ರಾರಂಭದಶೆಯಲ್ಲಿ ತಾವು ಅನುಸರಿಸಿದ ಯಾವುದೋ ಒಂದು ಪಂಥದ ಭಾವನೆಗಳನ್ನು ಅನುಸಂಧಾನ ಮಾಡುವುದೂ ಉಂಟು. ಉಪದೇಶಿಸುವುದೂ ಉಂಟು. ಪರಿಪಾಕಾವಸ್ಥೆಯಲ್ಲಿ ಪಂಥಗಳ ಭೇದದೃಷ್ಟಿಯು ಮಾಯವಾಗಿ ಸಾರ್ವಾತ್ಮ್ಯಭಾವನೆಯು ಸ್ಥಿರವಾಗುತ್ತದೆ. ಇದು ಆಂತರೀಯ ಪರಿವರ್ತನೆಯ ಪರಿಣಾಮ. ಪರಿಪಾಕ ಮುಟ್ಟಿದ ಎಲ್ಲಾ ಅನುಭಾವಿಗಳೂ ಈ ಅಂಶದಲ್ಲಿ ಒಮ್ಮತವನ್ನು ಪಡೆದಿರುತ್ತಾರೆ. ಈ ಕಾರಣದಿಂದಲೇ ಈ ಅನುಭಾವಿಗಳ ಉದ್ಗಾರಗಳು ಕೆಲವೆಡೆ ಹಿಂದು ಮುಂದು ವಿರುದ್ಧವಾಗಿ ತೋರು

ವುದುಂಟು. ಒಂದುಕಡೆ ದ್ವೈತಭಾವನೆ, ಮತ್ತೊಂದುಕಡೆ ಅದ್ವೈತ ಭಾವನೆ; ಹಾಗೆಯೇ ಶೈವ ವೈಷ್ಣವ ಶಾಕ್ತ ಮೊದಲಾದ ಭೇದ ಜ್ಞಾನಕ್ಕೆ ವಿಷಯವಾಗುವ ಪಂಥಗಳ ಅಭಿಪ್ರಾಯಗಳನ್ನು ಪ್ರಸ್ತಾಪಿಸುವುದುಂಟು. ಅನುಭವವು ನಿರ್ಮಲವಾದರೆ ಸ್ವಯಂಪ್ರಕಾಶವಾಗಿ ಏಕರೂಪವಾಗಿ ಅಖಂಡವಾಗಿ ನಿಲ್ಲುತ್ತದೆ. ಇಂತಹ ಸನ್ನಿವೇಶಗಳು ಅನುಭವಕ್ಕೆ ಬಂದಾಗ ಹಿಂದೆ ಈ ಅನುಭಾವಿಯು ಉಪಾಸನೆ ಮಾಡುತ್ತಿದ್ದ ಮತ್ತು ಅನುಸರಿಸುತ್ತಿದ್ದ ಭಾವನಾ ವಿಷಯಗಳಲ್ಲಿ ಉದಾಸೀನ ತೋರುವುದುಂಟು; ಅಥವಾ ಬೇರೆ ಬೇರೆ ಭಾವನೆಗಳಲ್ಲಿ ಐಕ್ಯಭಾವನೆಯೇ ಸತ್ಯವೆಂದು—ಭೇದಭಾವನೆಗಳೆಲ್ಲಾ ಅಖಂಡವಾದ ಶಕ್ತಿಯ ವಿಲಾಸವೆಂದು ತೃಪ್ತಿಪಡುವುದೂ ಉಂಟು. ಶಿವನೋ ಕೇಶವನೋ ಜಿನನೋ ಬುದ್ಧನೋ ಬ್ರಹ್ಮನೋ ಯಾರಾದರೂ ಆಗಲಿ ನನ್ನನ್ನು ಈ ಅಜ್ಞಾನದಿಂದ ಬಿಡುಗಡೆಮಾಡಿದರೆ ಸಾಕು ಎಂದು ಶರಣಾಗತಿಯನ್ನು ಮಾಡುವುದೂ ಉಂಟು. ಈ ಭಾವನೆಗಳನ್ನು ಆಗಿಂದಾಗ್ಗೆ ಅವರವರ ಪರಿಪಾಕಕ್ಕನುಸಾರವಾಗಿ ಹೇಳುತ್ತಾರೆ. ತಮ್ಮ ಅನುಭವಕ್ಕೆ ಬಂದ ಅಂಶವನ್ನು ಮುಚ್ಚುಮರೆಯಿಲ್ಲದೆ ಹೇಳುವುದು ಮತ್ತು ಅನುಸಂಧಾನ ಮಾಡುವುದು ಇವರ ಹಿರಿಮೆ. ಯಾವುದೋ ಒಂದು ಸಂದರ್ಭದಲ್ಲಿ ಒಂದು ಅಂತಸ್ತಿನಲ್ಲಿ ತಿಳಿದ ವಿಷಯವು ಅನುಭವಕ್ಕೆ ವಿರುದ್ಧವಾದರೆ ಅಥವಾ ಅನುಭವದಿಂದ ಬೇರೆ ರೂಪವನ್ನು ಪಡೆದರೆ ಅವುಗಳನ್ನು ಬದಲಾಯಿಸಕೂಡದೆಂಬ ಹಟ ಇವರಿಗಿರುವುದಿಲ್ಲ.

## ೨. ಲಲ್ಲಯೋಗೀಶ್ವರಿಯ ಸೂಕ್ಷ್ಮ ಪರಿಚಯ

ಹಿಂದಿನ ಕಾಲದಲ್ಲಿ ಉದಾತ್ತಚರಿತರಿಗೆ ಜನ್ಮಭೂಮಿಯಾದ ಕಾಶ್ಮೀರದಲ್ಲಿ ಓಜಸ್ವಿಗಳೂ ತಪಸ್ವಿಗಳೂ ಆದ ಅನುಭಾವಿಗಳು ತಮ್ಮ ನಡತೆಯಿಂದಲೂ ಉಪದೇಶದಿಂದಲೂ ಸಿದ್ಧಿಯಿಂದಲೂ ಜನತೆಯ ಬಾಹ್ಯ ಮತ್ತು ಆಂತರ್ಯತೆಯ ಶಿಕ್ಷಣವನ್ನೂ ಸಂಸ್ಕರಣವನ್ನೂ ಮಾಡಿರುತ್ತಾರೆ. ಇಲ್ಲಿನ ಅನುಭಾವಿಗಳ ಪಂಕ್ತಿಯಲ್ಲಿ ಕಾಶ್ಮೀರ ಜನತೆಯ ಮೇಲೆ ಹೆಚ್ಚು ಪ್ರಭಾವವನ್ನು ಬೀರಿದ ಲಲ್ಲೇಶ್ವರಿಯೆಂಬ ಯೋಗಿನಿಯು ಬಹು ಪ್ರಖ್ಯಾತಳಾದವಳು. ಇವಳನ್ನು ಕಾಶ್ಮೀರಿ ಜನಗಳು 'ಲಲ್ಲಾಡೆಡ್' ಎಂಬ ಪ್ರೀತಿಸೂಚಕವಾದ ಹೆಸರಿನಿಂದಲೂ 'ಲಲ್ಲಾ' 'ಲಲ್ಲಯೋಗೀಶ್ವರಿ' ಎಂಬ ಹೆಸರುಗಳಿಂದಲೂ ಕರೆಯುತ್ತಿದ್ದರು. ಕ್ರಿ. ಶ. ೧೪ನೆ ಶತಮಾನದಲ್ಲಿ ಜೀವಿಸಿದ್ದ ಲಲ್ಲೇಶ್ವರಿಯು ಅನುಭಾವಿಗಳಲ್ಲಿ ಮಿಗಿಲಾದವಳು. ಈಕೆಯ ವಿಷಯದಲ್ಲಿ ಸಮಕಾಲೀನರು ಬರೆದ ಪುಸ್ತಕಗಳಾವುವೂ ಸಿಕ್ಕುವುದಿಲ್ಲ. ನಮಗೆ ಸಿಕ್ಕುವುದು ಈಕೆಯ ವಚನಗಳು ಮತ್ತು ಐತಿಹಾಸಿಕ ಚರಿತ್ರೆಯಲ್ಲಿ ಅಲ್ಲಲ್ಲಿ ಕಂಡುಬರುವ ಈಕೆಯ ಪವಾಡಗಳು ಮತ್ತು ದಂತ ಕಥೆಗಳು. ಈಕೆಯ ವಚನಗಳು 'ಲಲ್ಲ ವಾಕ್ಯಾನಿ' ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಇವು ಕಾಶ್ಮೀರಿ ಭಾಷೆಯಲ್ಲಿ ಮೂಲ ರೂಪದಲ್ಲಿ ಸಿಕ್ಕುತ್ತವೆ. ಈಕೆಯ ವಿಷಯವಾಗಿ ದೊರೆತಿರುವ ದಂತಕಥೆಗಳನ್ನೂ ಪವಾಡಗಳ ವಿವರಗಳನ್ನು ಬರೆಯುತ್ತಾ ಹೋದರೆ ಅದೊಂದು ದೊಡ್ಡ ಗ್ರಂಥವೇ ಆಗುವುದು. ಇವುಗಳಿಂದ ನಾವು ತಿಳಿಯಬಹುದಾದದ್ದು ಏನೆಂದರೆ—ಈಕೆಯು ಹಿಂದಿನ ಜನ್ಮದ ಸಂಸ್ಕಾರದಿಂದಲೇ ಅಲೌಕಿಕವಾದ ಶಕ್ತಿಯನ್ನೂ ಅನುಭವವನ್ನೂ ಪಡೆದಿದ್ದಳು. ಈಕೆಯು ಸೌಜನ್ಯದಿಂದ ಕೂಡಿದ ಜ್ಞಾನಿಯೂ ಶೈವಮತಾವಲಂಬಿಯೂ ಆಗಿದ್ದಳೆಂಬುದು ಈಕೆಯ ವಾಕ್ಯಗಳಿಂದಲೇ ವ್ಯಕ್ತಪಡುತ್ತದೆ. ಈಕೆಯನ್ನು ಕಾಶ್ಮೀರದಲ್ಲಿ ಹಿಂದೂ ಮುಸಲ್ಮಾನರೆಲ್ಲರೂ ಒಂದೇ ಸಮನಾಗಿ ಗೌರವಿಸುತ್ತಿದ್ದರು. ಈಕೆಯ ವಾಕ್ಯಗಳು ಕಾಶ್ಮೀರಿಯವರಿಗೆ ಮನೆ ಮಾತಾಗಿ, ಗಾದೆಗಳಾಗಿ ಒಗಟುಗಳಾಗಿ ದೃಷ್ಟಾಂತಗಳಾಗಿ ಈಗಲೂ ಉಳಿದಿವೆ.

ಲಲ್ಲೇಶ್ವರಿಯು ಕಾಶ್ಮೀರದ ಶ್ರೀನಗರದ ಹತ್ತಿರ ಇರುವ ಪಂಡ್ರೆಸ್ತಾನ್ (ಪುರಾಣಾಧಿಷ್ಠಾನ) ಎಂಬ ಊರಿನಲ್ಲಿ ಕಾಶ್ಮೀರ ಶೈವ ಸಂಪ್ರದಾಯಕ್ಕೆ ಸೇರಿದ ಪಂಡಿತ ವಂಶದಲ್ಲಿ ಜನಿಸಿದಳು. ಈಕೆಗೆ ೧೨ನೆಯ ವಯಸ್ಸಿನಲ್ಲಿ ಪಂಪಾಪುರ(ಪದ್ಮಾಪುರ)ದ ನಿಜಾಬಾತ್ ಎಂಬ ಪಂಡಿತ ವಂಶದ ಸಿದ್ಧನ ಮಗನೊಂದಿಗೆ ಮದುವೆಯಾಯಿತು. ಮಾವ ನಿಂದ ಈಕೆಗೆ ಪದ್ಮಾವತಿಯೆಂದು ನಾಮಕರಣವಾಯಿತು. ಈಕೆಯ ಗಂಡನ ಮಲತಾಯಿಯಾದ ಅತ್ತೆಯು ಸಂಸಾರದಲ್ಲಿ ವಿಶೇಷ ತೊಂದರೆ ಯನ್ನು ಕೊಡುತ್ತಿದ್ದರೂ ಮೂರ್ತಿಭವಿಸಿದ ಕ್ಷಮಾಗುಣವೋ ಎಂಬಂತೆ ಅತ್ತೆಯು ಕೊಡುತ್ತಿದ್ದ ಕ್ರೂರ ಹಿಂಸೆಯನ್ನು ೧೨ ವರ್ಷ ತಾಳ್ಮೆಯಿಂದ ಸಹಿಸಿಕೊಂಡು ಜೀವನವನ್ನು ಸಾಗಿಸಿದಳು. ಎಷ್ಟು ಕಷ್ಟಪಟ್ಟು ಕೆಲಸ ಮಾಡಿದರೂ ಎಷ್ಟು ವಿನಯದಿಂದ ವರ್ತಿಸಿದರೂ ಅತ್ತೆಯ ಮನೆಯಲ್ಲಿ ವಾಸಿಸುವುದು ಅಸಾಧ್ಯವಾಯಿತು. ವೈರಾಗ್ಯಮನೋವೃತ್ತಿಯನ್ನು ಬೆಳಸಿಕೊಂಡು ಬಂದಿದ್ದ ಲಲ್ಲೇಶ್ವರಿಯು ಮನೆಯನ್ನು ಬಿಟ್ಟು ದೇಶ ದಲ್ಲೆಲ್ಲಾ ಸಂಚಾರ ಹೊರಟಳು.

Blessed are they who wander for
they find their home one day

"ಯಾರು ಹುಡುಕುವುದಕ್ಕೆ ಹೊರಡುವರೋ ಅವರೇ ಧನ್ಯರು. ಅವರು ಒಂದಾನೊಂದು ದಿನ ಸ್ವಸ್ಥಾನವನ್ನು ಸೇರುವರು" ಎಂಬಂತೆ ಲಲ್ಲೇಶ್ವರಿಯು ತನ್ನ ಒಡೆಯನಾದ ಶಿವನನ್ನು ಹುಡುಕುತ್ತಾ ಹೊರಟಳು. ತನ್ನ ಸಂಚಾರದಲ್ಲಿ ಸಿದ್ಧನಾಥನೆಂಬ ಒಬ್ಬ ಶಿವಯೋಗಿ ದೊರೆತನು. ಆತನ ಶಿಷ್ಯಳಾಗಿ ಯೋಗಾಭ್ಯಾಸವನ್ನು ಪೂರೈಸಿ ಆಧ್ಯಾತ್ಮ ವಿದ್ಯೆಯಲ್ಲಿ ತನ್ನ ಗುರುವಿಗಿಂತಲೂ ಹೆಚ್ಚಾಗಿ ಮುಂದುವರಿದಳು. ತನ್ನ ಅಭ್ಯಾಸದಲ್ಲಿ ಸಿದ್ಧಿಯನ್ನು ಪಡೆದ ಮೇಲೆ ದೇಶದಲ್ಲೆಲ್ಲಾ ತಿರುಗುತ್ತಾ ಜನಗಳಿಗೆ ನೀತಿ ಮತ್ತು ಧರ್ಮಗಳನ್ನು ಉಪದೇಶ ಮಾಡುತ್ತಾ ಬಂದಳು. ಈ ಪ್ರವಾಸ ದಲ್ಲಿ ಈಕೆಗೆ ಅನೇಕರು ಶಿಷ್ಯರಾದರು. ಜನರಲ್ಲಿ ಕಂಡುಬಂದ ಮೂಢ ನಂಬಿಕೆಗಳನ್ನೂ ಕೆಲಸಕ್ಕೆ ಬಾರದ ಸಂಪ್ರದಾಯಗಳನ್ನೂ ಖಂಡಿಸಿ ಅವರನ್ನು ಧರ್ಮಮಾರ್ಗದ ಕಡೆಗೆ ಒಯ್ಯುತ್ತಿದ್ದಳು. ಈಕೆಯ ಉಪದೇಶ

ಗಳನ್ನು ಕೇಳಿದವರನೇಕರು ತಾವಾಗಿಯೇ ತಿದ್ದಿಕೊಳ್ಳುತ್ತಿದ್ದರು. ಈಕೆಯ ಸಂಚಾರದಲ್ಲಿ ಅನೇಕ ಸನ್ಯಾಸಿಗಳನ್ನು ಮುಸಲ್ಮಾನ್ ಫಕೀರರನ್ನು ಕಂಡು ಅವರೊಂದಿಗೆ ಮಾತುಕತೆ ನಡೆಸಿ ಅವರ ಮುಂದೆ ತನ್ನ ಯೋಗ ಸಿದ್ಧಿಗಳನ್ನು ಪ್ರದರ್ಶಿಸಿ ಮುಗ್ಧಗೊಳಿಸಿದ್ದುಂಟು. ಈಕೆಗೆ ಪೂರ್ವಜನ್ಮ ಸ್ಮೃತಿ ಇತ್ತೆಂದು ಕಥೆಗಳಿವೆ. "ನಾನು ಬಹುದೂರ ಬಂದೆ ಎಲ್ಲೆಲ್ಲಿಯೂ ತಿರುಗಿದೆ" ಇವೇ ಮೊದಲಾದ ಉದ್ಗಾರಗಳು ಈಕೆಯ ಹಿಂದಿನ ಜನ್ಮದ ನೆನಪನ್ನು ಸೂಚಿಸುತ್ತವೆಂದು ಹೇಳಿದರೆ ತಪ್ಪಾಗಲಾರದು. ಅನುಭಾವಿಗಳ ಮಾತುಗಳಿಗೆ ಸಂಕುಚಿತವಾದ ಅರ್ಥ ಸಲ್ಲದು.

## ೩. ಲಲ್ಲವಾಕ್ಯಗಳ ವಿಮರ್ಶೆ

ಲಲ್ಲಾದೇವಿಯು ಸ್ವಚ್ಛಂದವಾಗಿ ದೇಶದಲ್ಲೆಲ್ಲಾ ಅಲೆಯುತ್ತಾ ಆವೇಶದಿಂದ ನರ್ತನ ಮಾಡುತ್ತಾ ಶಿವನನ್ನು ಕುರಿತು ಹಾಡಿದ್ದುಂಟು. ತನ್ನಷ್ಟಕ್ಕೆ ತಾನೇ ಕೆಲವು ಅನುಭವಗಳನ್ನು ಹೇಳಿದ್ದುಂಟು. ಇವುಗಳಲ್ಲಿ ಕೆಲವು ಸ್ವಾತ್ಮ ವಿಮರ್ಶೆ ಮಾಡಿಕೊಂಡಂತಿವೆ; ಮತ್ತೆ ಕೆಲವು ಕೇಳಿದ ಪ್ರಶ್ನೆಗೆ ಕೊಟ್ಟ ಉತ್ತರಗಳು. ಇವು ಸಾಮಾನ್ಯ ಜನರ ಸಂಶಯಗಳನ್ನು ಹೋಗಲಾಡಿಸಿ ಅವರನ್ನು ತಿದ್ದಿದಂತಿವೆ. ಇವು ಸಾಮಾನ್ಯ ಜನರ ಜೀವನ ಸಮಸ್ಯೆಗಳಿಗೆ ಹೊಂದುವಂಥವುಗಳಾಗಿ ನಮ್ಮ ಮನೋಭಾವನೆಗಳನ್ನು ಹದ ಮಾಡುವ ಸೂಚನೆಗಳಂತಿವೆ. ಹಾಗೆಯೇ ಹಲವಾರು ವಿಷಯಗಳನ್ನು ವಿವೇಚಿಸುತ್ತವೆ. ಮೇಲಾಗಿ ಹೊರಗಿನ ಪ್ರಪಂಚದಲ್ಲಿ ತೊಳಲುತ್ತಿರುವ ಮಾನವನು ಅಂತರ್ಯಾತ್ರೆಯ ಕಡೆಗೂ ಲಕ್ಷ್ಯ ಕೊಡುವಂತೆ ಪ್ರೇರಿಸುತ್ತವೆ. ಲಲ್ಲೇಶ್ವರಿ ವಾಕ್ಯಗಳನ್ನು ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸಿದರೆ ಈಕೆಯು ಅಭ್ಯಾಸಕಾಲದಿಂದ ಮೊದಲ್ಗೊಂಡು ಸಿದ್ಧಾವಸ್ಥೆಯವರೆಗೆ ತನಗುಂಟಾದ ಜ್ಞಾನ ವಿಕಾಸದ ಅಂತರಗಳನ್ನು ಹಂತ ಹಂತಗಳಲ್ಲಿ ಅನುಭವಿಸಿ ಆಯಾ ಸಮಯಗಳಲ್ಲಿ ಅಂದರೆ ವಿಚಾರಗಳೂ ವಿಮರ್ಶೆಗಳೂ ನಡೆಯುವಾಗ ತಾನು ಜಿಜ್ಞಾಸುಗಳಿಗೆ ಹೇಳಿರುವಂತೆ ತಿಳಿದು ಬರುತ್ತದೆ. ಈ ದೃಷ್ಟಿಯಿಂದ ಲಲ್ಲೇಶ್ವರಿಯ ಮಾತುಗಳು ಅನುಸಂಧಾನ ಮಾಡುವುದಕ್ಕೆ ಯೋಗ್ಯವಾಗಿವೆ. ಈಕೆಯು ಹಾಡುಗಳಾಗಲಿ, ವಾಕ್ಯಗಳಾಗಲಿ, ಉದ್ಗಾರಗಳಾಗಲಿ ಜನಗಳ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡದೇ ಹೋಗಿಲ್ಲ. ಈಕೆಯ ಬಾಯಿಂದ ಹೊರಟ ವಾಕ್ಯಗಳು ಚಿಕ್ಕವಾಗಿದ್ದರೂ ಗಾಢವಾದ ತತ್ತ್ವವನ್ನು ಸಮಂಜಸವಾದ ದೃಷ್ಟಾಂತಗಳಿಂದ ತಿಳಿಯಪಡಿಸತಕ್ಕವಾಗಿವೆ. ಮೇಲಾಗಿ ಈಕೆಯ ಪವಿತ್ರ ಮತ್ತು ಸರಳ ಜೀವನದಿಂದ ಹೊರಟ ಮೃದುವಾಕ್ಯಗಳು ಜೀವಂತ ಕಳೆಯಿಂದ ತುಂಬಿ ಪ್ರಿಯವಾಗಿದ್ದುವೆಂದು ಹೇಳಬೇಕಾಗಿಲ್ಲ. ಈಕೆಯ ಉದ್ಗಾರಗಳು ನೇರವಾಗಿ ಹೃದಯಕ್ಕೆ ತಟ್ಟುವಂತಿವೆ. ಈಕೆಯ ವಾಕ್ಯಗಳ ಸರಳತೆ ಭಾವಪುಷ್ಟಿ ಅರ್ಥಗಾಂಭೀರ್ಯ ತಲ್ಲೀನಚಿತ್ತವೃತ್ತಿಯನ್ನುಂಟು ಮಾಡುವ ಶೈಲಿ

ಮೊದಲಾದ ಗುಣಗಳು ಕಾಶ್ಮೀರಿ ಭಾಷೆಗೆ ಹೊಸ ಮೆರುಗನ್ನು ಕೊಟ್ಟಂತಿವೆಯೆಂದು ಕಾಶ್ಮೀರಿ ಪಂಡಿತರು ಹೇಳಿಕೊಂಡಿದ್ದಾರೆ. ಈಕೆಯ ಉಪದೇಶ ವಾಕ್ಯಗಳು ಶಿಷ್ಯರ ಅಂತಸ್ತಿಗನುಗುಣವಾಗಿವೆಯೆಂದು ಹೇಳ ಬಹುದು. ಗಹನವಾದ ಶಾಸ್ತ್ರ ವಿಷಯಗಳನ್ನು ಸರಳವಾಗಿಯೂ ಯೋಗಾ ಭ್ಯಾಸ ತತ್ತ್ವಗಳನ್ನು ವಿಶದವಾಗಿಯೂ ಅನುಭವದ ಹಂತಗಳನ್ನು ರಮಣೀಯವಾಗಿಯೂ ವಿವರಿಸಿರುವುದು ಈಕೆಯ ಹಿರಿಮೆಗೆ ನಿದರ್ಶನ ವಾಗಿದೆ.

ಅನುಭಾವಿಗಳು ವಿಶ್ವವನ್ನೆಲ್ಲಾ ತನ್ಮಯವಾಗಿ ನೋಡುವರು. ಪ್ರಪಂಚವೆಲ್ಲಾ ಒಂದೇ ಎನ್ನುವರು ಇವೇ ಮೊದಲಾದ ಪಾರಲೌಕಿಕ ಆಶಯಗಳನ್ನೇ ಹೆಚ್ಚಾಗಿ ಹೇಳುವುದು ಸಂಪ್ರದಾಯ. ಆಧ್ಯಾತ್ಮಸಿದ್ಧಿ ಯನ್ನು ಪಡೆದವರಲ್ಲಿ ಪ್ರಧಾನಳಾದ ಲಲ್ಲೇಶ್ವರಿಯು ಸಾಕ್ಷಾತ್ಕಾರ ಗುರಿಯನ್ನು ಮುಟ್ಟಲು ತನ್ನ ಪರಿಸ್ಥಿತಿಗನುಸಾರವಾಗಿ ಶ್ರಮಿಸಿರುತ್ತಾಳೆ. ಸಾಧಕರು ಇಂತಹವರ ಜೀವನಕ್ರಮವನ್ನರಿತುಕೊಂಡರೆ ಇವರು ಯಾವ ದಶೆಯಲ್ಲಿ ಯಾವರೀತಿ ಮಾತನಾಡಿದರು, ಯಾವ ಸಂದರ್ಭದಲ್ಲಿ ಯಾವ ವಾಕ್ಯಗಳನ್ನು ಬರೆದರು, ಹಾಡುಗಳನ್ನು ಹಾಡಿದರು ಎಂಬುದು ನಮಗೆ ಅರ್ಥವಾಗುತ್ತದೆ. ಈಕೆಯು ತನ್ನ ಅನುಭವದ ಪರಿಪಾಕವನ್ನು ಸರಳವಾಗಿಯೂ ಗಹನವಾದ ತತ್ತ್ವಗಳನ್ನು ಸಾಕ್ಷಾತ್ಕರಿಸುವ ಕ್ರಮ ದಲ್ಲಿಯೂ ವಿವರಿಸಿದ್ದಾಳೆ. ಅನುಭವದಿಂದುಂಟಾಗುವ ಶಾರೀರಕ ವ್ಯತ್ಯಾಸ ಗಳನ್ನೂ ಪ್ರಾಣಕ್ರಿಯೆಗಳ ನಿರೋಧದಿಂದುಂಟಾಗುವ ಏಕಾಗ್ರತೆಯನ್ನೂ ವಿಶದಪಡಿಸಿರುತ್ತಾಳೆ. ಮನಸ್ಸಿನ ಏಕಾಗ್ರತೆಯಿಂದ ಮನಸ್ಸಿಗೆ ಬರುವ ಪವಿತ್ರತೆ, ಸ್ಥೈರ್ಯ, ಕಾರ್ಯತತ್ಪರತೆಗಳನ್ನು ಯಾವ ರೀತಿ ಅನುಸರಿಸ ಬೇಕು, ಸಿದ್ಧಾವಸ್ಥೆಯಲ್ಲಿದ್ದರೂ ಪ್ರಾಪಂಚಿಕ ಮತ್ತು ಸಾಂಪ್ರದಾಯಿಕ ವಾದ ರೀತಿ ಮತ್ತು ನೀತಿಗಳನ್ನು ಯಾವದೃಷ್ಟಿಯಿಂದ ಆಚರಿಸ ಬೇಕು ಎಂಬುವನ್ನು ಸೂಚಿಸಿರುತ್ತಾಳೆ. ಸಾಮಾಜಿಕ ಆಚಾರಗಳೂ ನೀತಿ ಗಳೂ ಅಕ್ಷರಶಃ ಪಾಲಿಸಲು ಯಾರಿಗೂ ಸಾಧ್ಯವಾಗಲಾರದೆಂದು ಖಚಿತ ವಾಗಿ ಹೇಳಿ ಹೊರಗಿನ ಪರಿಸ್ಥಿತಿಗಿಂತ ಜೀವನಕ್ರಮವು ಯಾವ ಆಶ್ರಮ ರೂಪದಲ್ಲಿದ್ದರೂ ಭಾವನಾಕ್ರಮವು ಒಂದೇ ರೂಪದಲ್ಲಿರಬೇಕೆಂದು

ಸಿದ್ಧಾಂತ ಮಾಡಿರುತ್ತಾಳೆ. ಹೀಗೆ ಪ್ರಾಣಶಕ್ತಿಯನಿರೋಧ, ಮನಸ್ಸಿನ ಏಕಾಗ್ರತೆ ಆದರಿಂದುಂಟಾಗುವ ಸಿದ್ಧಿ, ಬಾಹ್ಯ ವ್ಯಾಪಾರಗಳನ್ನು ನೋಡ ಬೇಕಾದ ದೃಷ್ಟಿ, ಅದರಿಂದ ತನ್ನಲ್ಲೇರ್ಪಡುವ ನಿರ್ಲಿಪ್ತತೆಯನ್ನು ಒಂದು ಘಟ್ಟದಲ್ಲಿ ವಿವರಿಸಿ ಅಂತರ್ಯಾಗತೆಯ ಪರಿಪಾಕವನ್ನು ಪ್ರತ್ಯೇಕವಾಗಿ ಹೇಳಿ ದ್ದಾಳೆ. ವಿಕಲ್ಪಕ್ಕೆ ಆಶ್ರಯವಾಗಿರುವ ಚಿತ್ತ ವೃತ್ತಿಗಳನ್ನು ಮೀರಿ ಚಿದನುಭ ವವನ್ನು ಪಡೆಯಲಾಗಿ ಈ ವಿಶ್ವವೆಲ್ಲಾ ಹೇಗೆ ಚಿದಭಿನ್ನವೆಂಬುದನ್ನು ತೋರಿಸಿದ್ದಾಳೆ. ಹಾಗೆಯೇ ಕೆಲವು ಮಟ್ಟಗಳಲ್ಲಿ ವಿಗ್ರಹ ಧ್ಯಾನ, ತೀರ್ಥ ಯಾತ್ರೆ ಮೊದಲಾದುವುಗಳು ಒಂದು ಹಂತದಲ್ಲಿ ಸಹಕಾರಿಗಳಾಗಿರು ತ್ತವೆ, ಮತ್ತೊಂದು ಹಂತದಲ್ಲಿ ಹೇಗೆ ಸಹಕಾರಿಗಳಲ್ಲವೆಂದು ನಿರೂಪಿಸಿರು ತ್ತಾಳೆ. ವಿಶ್ವವು ಚಿದಭಿನ್ನವೆಂದು ಅನುಭವಕ್ಕೆ ಬಂದಾಗ ತಾನು ವಿಶ್ವವ್ಯಾ ಪಿಯಾದ ಶಿವನ ಅಂಶನೆಂದೂ ಶಿವನ ಸರ್ವಜ್ಞತ್ವಾದಿ ಗುಣಗಳು ತನ್ನಲ್ಲಿ ಸಂಕುಚಿತವಾಗಿರುವುದೊಂದೇ ಜೀವಭಾವಕ್ಕೆ ಹೇತುವೆಂದೂ ಯುಕ್ತಿ ಯಿಂದಲೂ ಅನುಭವದಿಂದಲೂ ವಿವರಿಸಿರುತ್ತಾಳೆ. ಈ ಸ್ಥಿತಿಯನ್ನು ಅನುಭವಿಸಿ ಈಕೆ ತನಗೆ ಯಾರೂ ಬಂಧುಗಳಿಲ್ಲ, ತಾನು ಯಾರಿಗೂ ಬಂಧು ವಲ್ಲವೆಂಬ ನಿರ್ಲಿಪ್ತತೆಯನ್ನು ಬೋಧಿಸಿರುತ್ತಾಳೆ. ತಾನು ಮಾಡುವ ಎಲ್ಲಾ ಬಾಹ್ಯ ವ್ಯಾಪಾರಗಳೂ ಆ ಪರಾಶಕ್ತಿಯ ಲೀಲೆಯೆಂದು ತನ್ನ ಜೀವನದ ಅವಧಿಯಲ್ಲಿಯೇ ಆ ಪರಾನಂದವನ್ನು ಅನುಭವಿಸುತ್ತಿರುವ ಹಾಗೆ ಹೇಳಿ ಕೊಂಡಿರುತ್ತಾಳೆ. ಪಂಡಿತ ಮನೆತನದಲ್ಲಿ ಬೆಳೆದುಬಂದ ಈಕೆಯ ಮಾತು ಗಳು ಶಾಸ್ತ್ರೀಯಪರಿಭಾಷೆಯಿಂದಲೂ ಅನುಭವಸ್ಫೂರ್ತಿಯಿಂದಲೂ ರೂಪುಗೊಂಡಿವೆ. ಕಾಶ್ಮೀರಶೈವ ಸಿದ್ಧಾಂತದ ಪ್ರಮೇಯಗಳು ಮತ್ತು ಸಾಧನಾ ಕ್ರಮಗಳು ಈಕೆಯ ವಾಕ್ಯಗಳಲ್ಲಿ ಸಮಂಜಸವಾಗಿ ಹೊಂದಿ ಕೊಂಡಿರುವುದನ್ನು ಕಾಣಬಹುದು. ಈಕೆಯ ವಚನಗಳನ್ನು ವಿವರ ಗಳೊಡನೆ ಅನುಸಂಧಾನಮಾಡಿದರೆ ಪಂಡಿತರಿಗೆ ವಿಮರ್ಶ ಭೂಮಿಕೆ ಯಾಗುತ್ತದೆ. ಭಾವನಾಶಾಲಿಗಳಿಗೆ ಪ್ರಬೋಧಕವಾಗುತ್ತದೆ. ಸಾಧಕ ರಿಗೆ ಪ್ರೇರಕವಾಗುತ್ತದೆ.

ಲಲ್ಲೇಶ್ವರಿಯ ಜೀವನ ಮತ್ತು ವಾಕ್ಯಗಳ ವಿಚಾರವಾಗಿ ಎಷ್ಟು ಹೇಳಿದರೂ ಸ್ವಲ್ಪವೇ ಆಗುತ್ತದೆ. ಸಂಕ್ಷೇಪವಾಗಿ ನಮ್ಮ ಅವಗಾಹನೆಗೆ

ಮತ್ತು ವಿಕಾಸಕ್ಕೆ ಸಹಾಯವಾಗುವ ಬಗೆಯಲ್ಲಿ ತಿಳಿಯಬೇಕಾದುದು ಮುಖ್ಯವಾದ ವಿಷಯಗಳು ಮಾತ್ರ. ಜ್ಞಾನಿಯಾಗಲಿ, ಜಿಜ್ಞಾಸುವಾಗಲಿ ಅನುಭಾವಿಯಾಗಲಿ ಆಧ್ಯಾತ್ಮಿಕ ಸಾಧನೆಯಲ್ಲಿ ಮೂರು ಹಂತಗಳನ್ನು ಅವಶ್ಯವಾಗಿ ದಾಟಬೇಕಾಗಿರುತ್ತದೆ.

ಮೊದಲನೆ ಹಂತದಲ್ಲಿ ಜಿಜ್ಞಾಸುವಿಗೆ ಗುರುವಿನಿಂದ ಅಥವಾ ಶಾಸ್ತ್ರಾಧ್ಯಯನದಿಂದ ಹಾಗೂ ಯಾದೃಚ್ಛಿಕವಾದ ಉಪದೇಶದಿಂದ ವಿಷಯಗ್ರಹಣವಾಗಬೇಕು. ಇದಕ್ಕಾಗಿ ದೇಶ ದೇಶಾಂತರಗಳನ್ನು ಸಂಚರಿಸಬೇಕಾಗುತ್ತದೆ. ತಿಳಿದವರನ್ನು ಆಶ್ರಯಿಸಬೇಕಾಗುತ್ತದೆ. ಇದನ್ನೇ ಬಾಹ್ಯ ಪ್ರಪಂಚದಲ್ಲಿ ಸಂಚರಿಸುವುದು ಎನ್ನುವುದು. ಉಪದೇಶ ಮಾಡುವವರು ಸ್ವಯಂಸಿದ್ಧರಾಗಿದ್ದರೆ ಉಪದೇಶಗಳು ವಿಶದವಾಗಿರುತ್ತವೆ. ಅದಲ್ಲದೆ ಶಾಸ್ತ್ರ ಪಂಡಿತರಾಗಿದ್ದರೆ ಉಪದೇಶಗಳು ಗೂಢವಾಗಿರುತ್ತವೆ.

ಎರಡನೆ ಹಂತದಲ್ಲಿ ಅನುಭವಿಯು ತಾನಾಗಬೇಕೆಂದು ಬಯಸುವ ಸಾಧಕನು ತನಗೆ ತಿಳಿದ ವಿಷಯಗಳನ್ನು ತನ್ನ ಅಂತರ್ಯತೆಯ ವಿಕಾಸಕ್ಕೆ ಎಷ್ಟು ಮಾತ್ರ ಉಪಯೋಗಕ್ಕೆ ಬರುವವು ಎಂದು ಮನನ ಮಾಡುತ್ತಾನೆ. ಇಲ್ಲಿ ನಡೆಯುವುದು ವಿಚಾರ ಮಥನ ಮತ್ತು ಸಾಧನೆಯ ಅನುಷ್ಠಾನ. ಈ ಎರಡೂ ಅಂತರ್ಯವಾಗಿ ನಡೆಯುವುದರಿಂದ ಸಾಧಕನ ಅನುಭವಕ್ಕೆ ಮಾತ್ರ ಗೋಚರವಾಗುತ್ತವೆ. ಈ ರೀತಿಯ ಸಾಧನೆಯ ಪರಿಪಾಕದ ಭೇದಗಳನ್ನು ಅನೇಕ ಪರಿಯಾಗಿ ವರ್ಣಿಸುತ್ತಾರೆ.

ಮೂರನೆ ಹಂತದಲ್ಲಿ ಸಾಧಕನಿಗೆ ಶಾಶ್ವತವಾದ ತತ್ತ್ವ ಸ್ವರೂಪ ಗೋಚರಿಸಲಾಗಿ ಸಮಾಧಿ ಲಾಭವಾಗುತ್ತದೆ. ಇದನ್ನು ತತ್ತ್ವ ಸಾಕ್ಷಾತ್ಕಾರ, ಬ್ರಹ್ಮಾನುಭವ, ಅಮೃತತ್ತ್ವ ಪ್ರಾಪ್ತಿ ಮೊದಲಾದ ಪದಗಳಿಂದ ಸೂಚಿಸುತ್ತಾರೆ. ಈ ಸ್ಥಿತಿಯನ್ನು ಭಾಷೆಯಿಂದ ಹೇಳಲು ಸಾಧ್ಯವಿಲ್ಲವೆಂಬುದು ಅನುಭಾವಿಗಳ ನಿಶ್ಚಯ. ಹೀಗೆ ಬಾಹ್ಯ ಪರ್ಯಟನ ಅಥವಾ ಶ್ರವಣ, ವಿಷಯಗ್ರಹಣಕ್ಕಾಗಿಯೂ, ಅಂತರ್ಯವಾದ ಮನನ, ಆಧ್ಯಾತ್ಮ ವಿಕಾಸಕ್ಕಾಗಿಯೂ ನಡೆಯುತ್ತದೆ. ತತ್ತ್ವಸಾಕ್ಷಾತ್ಕಾರವು

ಕೊನೆಯ ಗುರಿಯಾಗಿರುತ್ತದೆ. ಲಲ್ಲೇಶ್ವರಿಯು ಇದೇರೀತಿಯಾಗಿ ಜ್ಞಾನ ಪಿಪಾಸುವಾಗಿ ಮೊದಲು ಪರ್ಯಟನ ಮಾಡಿದಳು. ಅನಂತರ ಧ್ಯಾನ ಮತ್ತು ಅಭ್ಯಾಸಗಳಿಂದ ಆಧ್ಯಾತ್ಮ ವಿಕಾಸವನ್ನು ಪಡೆದಳು. ಕೊನೆಗೆ ತನ್ನಲ್ಲಿಯೇ ತತ್ತ್ವಸಾಕ್ಷಾತ್ಕಾರವನ್ನು ಹೊಂದಿದಳು. ಪೂರ್ಣ ಅನುಭವಿಯಾದ ಈಕೆಯ ಮಾತುಗಳಲ್ಲಿ ಸರ್ವತೋಮುಖವಾದ ಉದಾತ್ತ ಭಾವನೆಗಳು ಹೊರಹೊಮ್ಮಿರುತ್ತವೆ. ತಿಳಿದುಕೊಳ್ಳುವವರ ಪರಿಪಾಕದ ಮೇಲೆ ಸಂಕ್ಷೇಪವಾಗಿಯೂ ವಿಸ್ತಾರವಾಗಿಯೂ ಬೋಧಕಗಳಾಗಿರುತ್ತವೆ. ಪ್ರೇರಕಗಳಾಗಿರುತ್ತವೆ. "ಎಲ್ಲೆಲ್ಲಿಯೂ ತಿರುಗಿ ಕೊನೆಗೆ ನನ್ನಲ್ಲಿಯೇ ನನ್ನನ್ನು ಕಂಡೆ" 'ಎಷ್ಟುದಿವಸ ತಿರುಗಿದರೂ ಒಂದುದಿವಸ ತನ್ನನ್ನು ತಾನು ಕಾಣಬೇಕು' ಇವೇ ಮುಂತಾದ ಉದ್ಗಾರಗಳು ಉಪನಿಷತ್ತಿನ "ಆತ್ಮನ್ಯೇವ ಆತ್ಮಾನಂ ಪಶ್ಯೇತ್" ವಾಕ್ಯದ ಪ್ರತೀಕಗಳಾಗಿವೆ.

ಲಲ್ಲೇಶ್ವರಿಯ ಉಪದೇಶ ವಚನಗಳು ಬಹಳ ಇವೆಯೆಂದು ಕೇಳುತ್ತೇವೆ. ಆದರೆ ಅವುಗಳ ಸಾರ ಸಂಗ್ರಹರೂಪವಾಗಿ ಭಾಸ್ಕರಾಚಾರ್ಯನೆಂಬ ಪಂಡಿತನು ಅರವತ್ತು ಸಂಸ್ಕೃತ ಪದ್ಯಗಳಲ್ಲಿ ಈಕೆಯ ಮುಖ್ಯವಾದ ಹಾಡುಗಳನ್ನು ವಚನಗಳನ್ನು ಕಾಶ್ಮೀರಿ ಭಾಷೆಯಿಂದ ಸಂಸ್ಕೃತ ಭಾಷೆಗೆ ಪರಿವರ್ತನ ಮಾಡಿದ್ದಾನೆ. ಈತನು ಪಂಡಿತನಾದ್ದರಿಂದ ಲಲ್ಲೇಶ್ವರಿ ವಾಕ್ಯಗಳಲ್ಲಿ ಶಾಸ್ತ್ರೀಯವಾದ ತತ್ತ್ವವಿಮರ್ಶೆಯನ್ನು ಸೂಚಿಸಿರುವುದನ್ನು ಗಮನಿಸಬಹುದು. ಭಾಸ್ಕರಕವಿಯ ಸಂಸ್ಕೃತ ಶ್ಲೋಕಗಳನ್ನು ಐದು ಭಾಗವಾಗಿ ವಿಂಗಡಿಸಿ ಲಲ್ಲಯೋಗೀಶ್ವರಿಯ ಆಧ್ಯಾತ್ಮಿಕ ಹಂತಗಳನ್ನು ವಿವರಿಸಲು ಪ್ರಯತ್ನಿಸಿದ್ದೇನೆ. ಕೆಲವು ಆಂಗ್ಲ ವಿದ್ವಾಂಸರು ಈಕೆಯ ಇನ್ನೂ ಹೆಚ್ಚಿನ ವಚನಗಳನ್ನು ಸಂಗ್ರಹಿಸಿ ದೀರ್ಘವಾದ ಪೀಠಿಕೆಗಳೊಂದಿಗೆ ಇಂಗ್ಲೀಷಿಗೆ ಭಾಷಾಂತರಿಸಿರುತ್ತಾರೆ. ಈ ಅನುವಾದಗಳ ಭಾಷಾಂತರಗಳನ್ನು ಪೂರ್ಣವಾಗಿ ಅರ್ಥಿಸುವುದು ಸಾಧ್ಯವಿಲ್ಲದಿದ್ದರೂ ಕಾಶ್ಮೀರ ಶಿವಾದ್ವೈತ ತತ್ತ್ವಗಳ ಹಿನ್ನೆಲೆಯಲ್ಲಿ ಬೆಳೆದುಬಂದಿರುವ ಲಲ್ಲ ವಾಕ್ಯಗಳನ್ನು ಕಾಶ್ಮೀರೀ ಭಾಷಾಪಂಡಿತರಾದ ಆನಂದಕೌಲ್ ಮತ್ತು ಸರ್ ಜಾರ್ಜ್‌ಗ್ರಿಯರಸನ್ನರವರ ಇಂಗ್ಲೀಷ್ ಭಾಷಾಂತರಗಳನ್ನನುಸರಿಸಿ ಕನ್ನಡದಲ್ಲಿ ಪರಿವರ್ತಿಸಿದ್ದೇನೆ. ಇವು ಕೇವಲ ಭಾಷಾಂತರವಲ್ಲ.

ಭಾವಗ್ರಹಣ ಪ್ರಯತ್ನಗಳು ಮಾತ್ರ. ಇವುಗಳಲ್ಲಿ ಸ್ವಲ್ಪಮಟ್ಟಿಗಾದರೂ ಅನುಭಾವಿಗಳ ದೃಷ್ಟಿಯನ್ನು ಕಾಣಬಹುದು.

ತತ್ತ್ವಶಾಸ್ತ್ರದಿಂದ ಆಗತಕ್ಕ ಪ್ರಯೋಜನ ಸ್ವಸ್ವರೂಪದ ಅರಿವು. ತನ್ನ ಸ್ವರೂಪದ ಅರಿವನ್ನು ಭಾಷೆಯಲ್ಲಿ ತಿಳಿಸಲು ಸಾಧ್ಯವಿಲ್ಲದಿರುವುದರಿಂದ ತತ್ತ್ವವನ್ನು ತಿಳಿದಿರುವವರು 'ಪರಮಾರ್ಥ'ವನ್ನು ಈ ರೀತಿ ಸೂಚಿಸಿರುವರು.

ನ ದುಃಖಂ ನ ಸುಖಂ ಯತ್ರ ನ ಗ್ರಾಹ್ಯೋಗ್ರಾಹಕೋ ನಚ |
ನ ಚಾಸ್ತಿ ಮೂಢಭಾವೋಽಪಿ ತದಸ್ತಿ ಪರಮಾರ್ಥತಃ ||

(ಸ್ಪಂದಕಾರಿಕಾ)

ಈ ಮಟ್ಟವನ್ನು ಮುಟ್ಟಿದ ಲಲ್ಲೇಶ್ವರಿಯು ತಾನು ಬದುಕಿರುವವರೆಗೂ ಎಲ್ಲರಿಗೂ ಹಿತವನ್ನು ಕೋರುತ್ತಾ ಕೊನೆಗೆ ಸಾಯುಜ್ಯವನ್ನು ಪಡೆದಳು.

## ೪. ಲಲ್ಲಸೂಕ್ತಿಗಳು

### ಜಿಜ್ಞಾಸೆ

(ಮೊದಲನೆಯ ಹಂತ)

೧ ಕಯಾ ದಿಶಾ ಕೇನ ಪಥಾಗತಾಹಂ
ಪಶ್ಚಾದ್ಗಮಿಷ್ಯಾಮಿ ಪಥಾಯ ಕೇನ ।
ಇತ್ಥಂ ಗತಿಂ ವೇದ್ಮಿ ನಿಜಾಂ ನತಸ್ಮಾತ್
ಉಚ್ಛ್ವಾಸಮಾತ್ರೇಣ ಧೃತಿಂ ಭಜಾಮಿ ॥ ೪೧ ॥

ಯಾವ ದಿಕ್ಕಿನಿಂದ ಯಾವ ದಾರಿಯಿಂದ ನಾನು ಬಂದೆ, ಯಾವ ದಾರಿಯಿಂದ ಯಾವ ದಿಕ್ಕಿಗೆ ಹೋಗುತ್ತೇನೆ, ಹೀಗೆ ನನ್ನ ದಾರಿ ನನಗೆ ತಿಳಿಯದು. ಆದರೂ ತತ್ತ್ವವನ್ನು ತಿಳಿಯಬೇಕೆಂಬ ಆಸೆಯಿಂದ ಧೃತಿಗೆಡದೆ ಧೈರ್ಯ ತಂದುಕೊಳ್ಳುತ್ತಿದ್ದೇನೆ.

೨ ನಾಥ ನತ್ವಂ ನಚಾತ್ಮಾಪಿ ಜ್ಞಾತೋ ದೇಹಾಭಿಮಾನತಃ ।
ತ್ವಸ್ಯೈಕ್ಯಂ ಚತ್ವಯಾ ತೇನ ಕಾ ಅವಾಮಿತಿಸಂಶಯಃ ॥ ೭ ॥

ಪ್ರಭುವೆ, ನೀನೂ ನನಗೆ ತಿಳಿಯಲಿಲ್ಲ. ದೇಹಾಭಿಮಾನದಿಂದ ಜೀವಾತ್ಮ ಸ್ವರೂಪವೂ ನನಗೆ ತಿಳಿಯಲಿಲ್ಲ. ನೀನು ನಾನಾಗಿದ್ದೇನೆ. ನಾನು ನೀನಾಗಿದ್ದೀಯೆ. ನಾವಿಬ್ಬರೂ ಒಂದು ಎಂಬುದನ್ನೂ ತಿಳಿಯಲಿಲ್ಲ. ಆದುದರಿಂದ ನಾವಿಬ್ಬರೂ ಯಾರು ಎಂದು ಸಂಶಯವಾಗುತ್ತಲಿದೆ.

೩ ಶಿವೋವಾ ಕೇಶವೋವಾಪಿ ಜಿನೋವಾ ದ್ರುಹಿಣೋऽಪಿವಾ ।
ಸಂಸಾರರೋಗೇಣಾಕ್ರಾಂತಾಮಬಲಾಂ ಮಾಂಚಿಕಿತ್ಸತು ॥ ೮ ॥

ಶಿವನಾಗಲಿ, ಕೇಶವನಾಗಲಿ, ಜಿನನಾಗಲಿ, ಬ್ರಹ್ಮನಾಗಲಿ ಸಂಸಾರ ರೋಗದಿಂದ ಆಕ್ರಮಿಸಲ್ಪಟ್ಟಿರುವ ಅಬಲಳಾದ ನನ್ನನ್ನು ರಕ್ಷಿಸಲಿ.

೪ ಗುರೋರ್ಮಮ್ಯೈತಮುಪದೇಶಮೇಕಂ
ಕುರುಷ್ವ ಬೋಧಾಪ್ತಿಕರಂ ದಯಾತಃ ।
ಹಾಹೂ ಹೂಹೂ ಇಮಾವಾಸ್ತಃ ಸಮಮಾಸ್ಯಜಾತಾ
ವುಷ್ಣೋಽಸ್ತಿ ಹಾಹೂ ಕಿಮಥ ಹೂಹೂ ಸುಶೀತಃ ॥ ೫೬ ॥

ಗುರುವೇ, ದಯೆಯಿಂದ ಜ್ಞಾನವಿಕಾಸವನ್ನುಂಟು ಮಾಡುವ ಒಂದು ಉಪದೇಶವನ್ನು ನನಗೆ ಮಾಡು. ನನ್ನ ಬಾಯಿಯಲ್ಲಿಯೇ ಸಮವಾಗಿ ಹೊರಡುತ್ತಲಿರುವ ಪ್ರಾಣಾಪಾನಗಳಲ್ಲಿ ಒಂದು ಬಿಸಿಯಾಗಿದೆ ಒಂದು ತಣ್ಣಗಿದೆ. ಏನು ಕಾರಣ ಹೇಳು.

೫ ಜರಾಽಗತಾ ಕ್ಷೀಣತರೋಽದ್ಯ ದೇಹೋ
ಜಾತೋಽವಸಾಯೋ ಗಮನಾಯ ಕಾರ್ಯಃ ।
ಸಮಾಗತಾಃ ಸ್ಮೋ ಯತ ಏವ ತತ್ರ
ಗಂತವ್ಯಮೇವೇಹ ಧ್ರುವಂ ನ ಕಿಂಚಿತ್ ॥ ೧೯ ॥

ಮುಪ್ಪು ಬಂತು. ಶರೀರ ಕೃಶವಾಗಿ ಹೋಯಿತು. ಹೊರಡಲಿಕ್ಕೆ ಸಿದ್ಧತೆ ಮಾಡಬೇಕು. ಎಲ್ಲಿಂದ ಬಂದಿದ್ದೆವೋ ಅಲ್ಲಿಗೆ ಹೋಗಲೇಬೇಕು. ಈ ಲೋಕದಲ್ಲಿ ಶಾಶ್ವತವಾದದ್ದು ಯಾವುದೂ ಇಲ್ಲ.

೬ ಲಲ್ಲಾಹಂ ನಿರ್ಗತಾ ದೂರಮನ್ವೇಷ್ಟುಂ ಶಂಕರಂ ವಿಭುಂ ।
ಭ್ರಾಂತ್ವಾ ಲಬ್ಧೋ ಮಯಾ ಸ್ವಸ್ಮಿನ್ ದೇಹೇ ದೇವೋ ಗೃಹೇ ಸ್ಥಿತಃ ॥ ೩ ॥

ಲಲ್ಲಳಾದ ನಾನು ಒಡೆಯನಾದ ಶಂಕರನನ್ನು ಹುಡುಕಲು ಬಹಳ ದೂರ ಹೊರಟುಬಂದೆನು. ಎಲ್ಲೆಲ್ಲೋ ತಿರುಗಿ ಕೊನೆಗೆ ನನ್ನ ಮನೆಯಾಗಿರುವ ಈ ಶರೀರದಲ್ಲಿಯೇ ಆ ದೇವನಿರುವುದನ್ನು ಕಂಡೆನು.

೭ ದ್ರಷ್ಟುಂ ವಿಭುಂ ತೀರ್ಥವರಾನ್ಗತಾಹಂ
ಶ್ರಾಂತಾ ಸ್ಥಿತಾ ತದ್ಗುಣ ಕೀರ್ತನೇಷು ।
ತತೋಽಪಿ ಖಿನ್ನಾಸ್ಮಿ ಚ ಪಾನಕೇನ
ಸ್ವಾಂತರ್ನಿಪಿಷ್ಟಾ ಖಲು ತದ್ವಿಮರ್ಶೇ ॥ ೪೮ ॥

ವಿಭುವನ್ನು ನೋಡುವುದಕ್ಕೆ ತೀರ್ಥಕ್ಷೇತ್ರಗಳಿಗೆ ಹೋದೆನು. ಪರಮಾತ್ಮನ ಗುಣಗಳನ್ನು ಹೊಗಳುವುದರಲ್ಲಿ ಬಳಲಿದೆನು. ಆದರೂ

ಪರಮಾತ್ಮನನ್ನು ಕಾಣಲಾಗಲಿಲ್ಲವೆಂದು ಖಿನ್ನಳಾದೆನು. ಮನಸ್ಸಿನಲ್ಲಿ ಪರಮಾತ್ಮನ ಸ್ವರೂಪವಿಮರ್ಶೆ ಮಾಡುತ್ತಾ ನನ್ನಲ್ಲಿಯೇ ಇದ್ದಾನೆಂದು ಗುರುತಿಸಿದೆನು.

೮ ಸ್ನಾತಂ ಹಸಂತಂ ವಿವಿಧಂ ವಿಧೇಯಂ
ಕುರ್ವಂತಮೇತತ್ಪುರ ಏವ ಸಂತಮ್ ।
ಪಶ್ಯಾತ್ಮದೇವಂ ನಿಜ ದೇಹ ಏವ
ಕೃತಂ ಪ್ರದೇಶಾಂತರ ಮಾರ್ಗಣೇನ ॥ ೧೭ ॥

ಸ್ನಾನ ಮಾಡುತ್ತಲಿದ್ದಾನೆ, ನಗುತ್ತಲಿದ್ದಾನೆ, ಮಾಡತಕ್ಕ ಬೇರೆ ಬೇರೆ ಕೆಲಸಗಳನ್ನು ಮಾಡುತ್ತಲಿದ್ದಾನೆ. ನಮ್ಮ ಎದುರಿನಲ್ಲೇ ಇದ್ದಾನೆ. ನಮ್ಮ ದೇಹದಲ್ಲಿಯೇ ಇರುವ ಪರಮಾತ್ಮನನ್ನು ಧ್ಯಾನಮಾಡು, ಕಾಣು. ಪರಮಾತ್ಮನು ಎಲ್ಲಿಯೋ ಇದ್ದಾನೆಂದು ಹುಡುಕಬೇಡ.

೯ ಉತ್ತಿಷ್ಠ ಶಾಕ್ತಿಕ ತ್ರಿಸ್ತ್ವಂ ಪೂಜಯೇಶಂ ಸುರಾದಿಭಿಃ
ಯದಿಜ್ಞಾತ ಮಕ್ಷರಂತತ್ತ್ವಯಾ ತೇನಾಪಿ ಕಾ ಕ್ಷತಿಃ ॥ ೧೮ ॥

ಶಕ್ತಿಯ ಆರಾಧಕನೇ ಏಳು, ಇತರ ದೇವತೆಗಳೊಡನೆ ಕೂಡಿದ ಪರಮಾತ್ಮನನ್ನು ತ್ರಿಕಾಲಗಳಲ್ಲಿ ಪೂಜಿಸು. ಒಂದು ವೇಳೆ ಆ ನಾಶ ರಹಿತವಾದ ಪರಮಾತ್ಮನ ಸ್ವರೂಪವು ತಿಳಿದರೆ ಅದರಿಂದ ಏನು ತೊಂದರೆ?

ಪೂಜೆ ಅಂದರೆ ದೇವತೆಗೆ ಆಕಾರ ಪರಿವಾರ ಕೊಡಬೇಕು. ನಾಶರಹಿತವಾದ ಪ್ರಣವ ಸ್ವರೂಪಿಯಾದ ಪರಮಾತ್ಮನ ಸಾಕ್ಷಾತ್ಕಾರ ವಾಗಿದ್ದರೂ ಈ ಪೂಜಾ ವಿಧಾನಗಳಿಂದ ತೊಂದರೆಯಿಲ್ಲ–ನಿರಾಲಂಬನ ವಾಗಿ ಧ್ಯಾನದಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡಿದ್ದರೂ ಸಿದ್ಧಪುರುಷನಾದವನು ಸಾಲಂಬನವಾದ ಪೂಜೆಯನ್ನೂ ನಿತ್ಯ ನೈಮಿತ್ತಿಕ ಕರ್ಮಗಳನ್ನೂ ಲೋಕಮರ್ಯಾದಾಸಂರಕ್ಷಣಾರ್ಥವಾಗಿ ಆಚರಿಸಬೇಕೆನ್ನುವುದು ಸತ್ಸಂಪ್ರದಾಯ.

೧೦ ಯತ್ನೇನ ಮೋಕ್ಷೈಕಧಿಯಃ ಸದಾಮೀ
ಸನ್ಯಾಸಿನಸ್ತೀರ್ಥವರಾನ್ ಪ್ರಯಾಂತಿ |
ಚಿತ್ತೈಕ ಸಾಧ್ಯೋನಸಲಭ್ಯೇತೆ ತೈ
ರ್ದೂರ್ವಾಸ್ಥಲಂ ಭಾತ್ಯತಿ ನೀಲಮಾರಾತ್ ॥ ೩೬ ॥

ಮೋಕ್ಷವನ್ನು ಪಡೆಯಬೇಕೆಂಬ ಸನ್ಯಾಸಿಗಳು ಪ್ರಯತ್ನಪಟ್ಟು ತೀರ್ಥಕ್ಷೇತ್ರಗಳಿಗೆ ಹೋಗುತ್ತಾರೆ. ಆದರೂ ಮೋಕ್ಷವು ಮನಸ್ಸಿನಿಂದ ತನ್ನಲ್ಲಿಯೇ ಹೊಂದತಕ್ಕದ್ದಾಗಿದೆ. ದೂರದಿಂದ ನೋಡಿದರೆ ಗರಿಕೆ ಹುಲ್ಲು ನೀಲಬಣ್ಣದಿಂದಿರುವ ಹಾಗೆ ಕಾಣಿಸುತ್ತದೆ. ಆದರೆ ಅದು ಹಸುರಲ್ಲವೆ?

ಇಲ್ಲಿ ಗರಿಕೆ ಹುಲ್ಲನ್ನು ಪ್ರಾಪಂಚಿಕ ಸುಖಗಳು ಎಂಬರ್ಥದಲ್ಲಿ ಉಪಯೋಗಿಸಿದೆ. ಈ ಪ್ರಾಪಂಚಿಕ ಸುಖಗಳು ಆಕರ್ಷಣೀಯವಾಗಿ ಶಿವಜೀವೈಕ್ಯಜ್ಞಾನ ಮತ್ತು ಸಾಧನೆ ಇವುಗಳಿಂದ ದೂರವಾಗಿ ಮನಸ್ಸು ಹೋಗುವಂತೆ ಮಾಡುತ್ತವೆ. ಮೋಕ್ಷವು ಚಿತ್ತಿನಿಂದ ತನ್ನಲ್ಲಿಯೇ ಹೊಂದತಕ್ಕದ್ದಾಗಿರುತ್ತದೆ.

## ಶಾಸ್ತ್ರಜ್ಞಾನ-ಸ್ವಾತ್ಮವಿಮರ್ಶೆ
### (ಎರಡನೆಯ ಹಂತ)

೧೧ ಅಭ್ಯಾಸೇನ ಲಯಂನೀತೆ ದೃಶ್ಯೇಽಶೂನ್ಯತ್ವಮಾಗತೇ |
ಸಾಕ್ಷಿರೂಪಂ ಶಿಷ್ಯತೇ ತಚ್ಛಾಂತೇ ಶೂನ್ಯೇಽಪ್ಯನಾಮಯಮ್ ॥ ೧ ॥

ನಮ್ಮ ಬುದ್ಧಿಗೆ ಗೋಚರಿಸುವ, ಕಣ್ಣಿಗೆ ಕಾಣಿಸುವ ಬೇರೆ ಬೇರೆಯಾಗಿರುವ ಈ ವಿಶ್ವದ ಎಲ್ಲಾ ಪದಾರ್ಥಗಳೂ ತತ್ತ್ವಾಭ್ಯಾಸದ ಅಥವಾ ಯೋಗಾಭ್ಯಾಸದ ಪರಿಪಾಕದಿಂದ ಪರಿವರ್ತಿಸಲ್ಪಟ್ಟು ಚಿದ್ರೂಪವನ್ನು ಅಥವಾ ಶೂನ್ಯತ್ವವನ್ನು ಪಡೆದರೂ ಆಗ ಉಳಿಯುವುದು ಪರಮಾತ್ಮವೊಂದೇ. ಆ ಆತ್ಮವು ಆ ಪ್ರಶಾಂತವಾದ ನಿರ್ವಿಕಾರ ಸ್ಥಿತಿಯಲ್ಲಿಯೂ ಏನೂ ಉಬ್ಬರವಿಳಿತಗಳಿಲ್ಲದೆ ಈ ಭೇದ ಪ್ರಪಂಚದಲ್ಲಿ ಸಾಕ್ಷಿರೂಪವಾಗಿ ಆನಂದಮಯವಾಗಿರುತ್ತದೆ. ಇದೇ ನಿಜವಾದ ಉಪದೇಶವು.

ತನ್ನಷ್ಟಕ್ಕೆ ತಾನೇ ಪ್ರಕಾಶಿಸುವ ಪರಿಶುದ್ಧವಾದ ಮುಖ್ಯ ಶಕ್ತಿಯೇ ಸಾರವಾಗುಳ್ಳ ಸಂವಿತ್, ಚಿತ್, ಮೊದಲಾದ ಪದಗಳಿಂದ ಹೇಳಲ್ಪಡುವ ಆ ಚಿದ್ರೂಪವು ಪರಮಾರ್ಥವಾದದ್ದು—ಸತ್ಯವಾದದ್ದು. ಈ ಸಂವಿತ್ತು ತನಗಿಂತ ಬೇರೆ ಬೇರೆಯಾಗಿರುವ ಭಿನ್ನ ಭಿನ್ನವಾದ ಪದಾರ್ಥಗಳನ್ನು ಸಂಕೋಚ ಸ್ಥಿತಿಯಲ್ಲಿ ಪ್ರಮೇಯ ಭಾವದಿಂದ ಗ್ರಹಿಸುತ್ತಿರುತ್ತದೆ. ವಿಕಾಸ ಸ್ಥಿತಿಯಲ್ಲಿ ಈ ಪ್ರಮೇಯ ಭಾವವನ್ನು ಬಿಟ್ಟು ನಿರ್ಮಲವಾಗಿ ಮೇಘಗಳಿಲ್ಲದ ಆಕಾಶದ ಹಾಗೆ ಸ್ಫುರಿಸುತ್ತದೆ. ಇದನ್ನೇ ಚಿದ್ಗಗನ ಎಂದು ವ್ಯವಹರಿಸುವುದು. ಯೋಗಿಯು ಧ್ಯಾನಾವಸ್ಥೆಯಲ್ಲಿ ತನ್ನ ಸಂವಿದ್ರೂಪಕ್ಕಿಂತ ಬೇರೆ ಯಾವ ಪ್ರಮೇಯವೂ ಇಲ್ಲವೆಂದು ವಿಮರ್ಶಿಸುತ್ತಾನೆ. ಇದೇ ಸ್ವಸ್ವರೂಪ ವಿಮರ್ಶೆ. ಸಂವಿತ್ತಿನ ಶೂನ್ಯರೂಪ ಇಂತಹುದು. ಪ್ರಶಾಂತವಾಗಿಯೂ ಅಖಂಡವಾಗಿಯೂ ಇರುವ ಸಂವಿತ್ತಿನ ಈ ಸ್ಥಿತಿಗೆ ಶೂನ್ಯ, ಶೂನ್ಯಾತಿಶೂನ್ಯ, ಮಹಾಶೂನ್ಯ, ನಿರಾಕಾರ, ಚಿತ್ಸ್ವರೂಪ, ಪರಾದಶಾ ಎಂದು ಶಾಸ್ತ್ರವ್ಯವಹಾರವಿದೆ.

ಚಿತ್ತವೃತ್ತಿಗಳಿಂದ ಸಂಬಂಧಿಸದೆ ಭೇದಜ್ಞಾನಗಳಿಗೆ ಆಕರವಾಗದೆ ಕ್ಲೇಶರೂಪವಾದ ಸಂಸ್ಕಾರಗಳಿಲ್ಲದೆ ಇರುವ ಸ್ಥಿತಿಗೆ ಶೂನ್ಯ ಎಂದು ಹೆಸರು. ಇದು ಏನೂ ಇಲ್ಲದಿರುವ ಸ್ಥಿತಿಯಲ್ಲ.

ಲಯ—ಉಪ್ಪು ನೀರಿನಲ್ಲಿ ಕರಗಿಹೋಗುವ ಹಾಗೆ ಕರಗಿ ಹೋಗುವುದು. ಇಲ್ಲಿ ಚಿತ್ತಿನಲ್ಲಿ ಸೇರಿಹೋಗುವುದು.

೧೩ ವಾಙ್ಮಾನಸಂಚ ತಸ್ಮಾದ್ರೇ ಶಿವಶಕ್ತೀಕುಲಾಕುಲೇ
ಯತ್ರಸರ್ವಮಿದಂ ಲೀನಮುಪದೇಶಂ ಪರಂತು ತತ್ ॥ ೩ ॥

ವಾಕ್ಕು ಮನಸ್ಸು ಇವುಗಳಿಂದ ತಿಳಿಯತಕ್ಕ ಗ್ರಾಹ್ಯಗ್ರಾಹಕ ಭಾವಾಪನ್ನವಾದ ಈ ವಿಶ್ವವೆಲ್ಲಾ ಯಾವುದರಲ್ಲಿ ಅಡಗಿದೆಯೋ ಅಂತಹ ಉಪದೇಶವೇ ಶ್ರೇಷ್ಠವಾದದ್ದು.

ವಾಕ್ಕು ಮನಸ್ಸುಗಳಿಂದ ತಿಳಿಯುವುದು ಭಿನ್ನಾಭಿನ್ನವಾಗಿರುವ ಈ ವಿಶ್ವ. ಇದು ಕುಲ. ಇದನ್ನು ದಾಟಿ ಆಚೆ ಇರುವುದು ಅಕುಲ. ಇದು ಅಭಿನ್ನವಾದದ್ದು. ಇವೆರಡೂ ಅಭೇದತ್ವವನ್ನು ಪಡೆದು ಏಕೀಭವಿಸುವಂತಹ ತತ್ತ್ವದ ಉಪದೇಶವೇ ಶ್ರೇಷ್ಠವಾದದ್ದು.

2

'ಶಿವ' ಅಭೇದತ್ವವನ್ನು ಸೂಚಿಸುತ್ತದೆ. 'ಶಕ್ತಿ' ಭೇದವನ್ನು ಸೂಚಿಸುತ್ತದೆ. ಈ ಶಿವಶಕ್ತಿಗಳ ಆಚೆ ಇರುವವನೇ ವಿಶ್ವಾತೀತನಾದ ಪರಮಶಿವ.

೧೩ ಚಿದಾನಂದೋ ಜ್ಞಾನರೂಪಃ ಪ್ರಕಾಶಾತ್ಮೋ ನಿರಾಮಯಃ |
ಯೈರ್ಲಬ್ಧೋ ದೇಹವಂತೋಽಪಿ ಮುಕ್ತಾಸ್ತೇಽನ್ಯೇಽನ್ಯಥಾಸ್ಥಿತಾಃ ||೬||

ಚಿದಾನಂದನಾಗಿ ಜ್ಞಾನರೂಪಿಯಾಗಿ, ಸ್ವಯಂಪ್ರಕಾಶನಾಗಿ, ನಿರಾಮಯನಾಗಿರುವ ಪರಮಾತ್ಮನು ಯಾರಿಗೆ ಸಾಕ್ಷಾತ್ಕಾರವಾಗಿರುವನೋ ಅವನು ಶರೀರದಿಂದಿದ್ದರೂ ಮುಕ್ತನೇ ಈ ಸಾಕ್ಷಾತ್ಕಾರವಿಲ್ಲದಿರುವವನು ಬೇರೆ ರೀತಿಯಾಗಿರುತ್ತಾನೆ. ಬದ್ಧನಾಗಿರುತ್ತಾನೆ.

೧೪ ದಾತುರ್ಮನಸ್ತೃಪ್ಯತಿ ನೈವರಾಜ್ಯಂ
ದತ್ವಾ ಗೃಹೀತುಶ್ಚ ತದೇವಲಬ್ಧ್ವಾ |
ಜೀವೋಽಪಿ ಲೋಭೇನ ನ ಮೃತ್ಯುಮೇತಿ
ಮೃತಸ್ಯನೈವಾಸ್ತಿ ಸ ಜಾತು ಮೃತ್ಯುಃ ||೧೨||

ರಾಜ್ಯವನ್ನು ಕೊಟ್ಟರೂ ದಾನಮಾಡುವವನ ಮನಸ್ಸು ತೃಪ್ತಿಯನ್ನು ಪಡೆಯುವುದಿಲ್ಲ. ದಾನ ಪಡೆಯುವವನಿಗೂ ಕೂಡ ಆ ರಾಜ್ಯವನ್ನು ಪಡೆದರೂ ಮನಸ್ಸು ತೃಪ್ತಿಯಾಗುವುದಿಲ್ಲ. ಜೀವನೂ ಕೂಡ ಲೋಭದಿಂದ ಸಾಯುವುದಿಲ್ಲ; ಅಂದರೆ ಇವನು ಆಶೆಗಳಿಂದಿರುವವರೆಗೂ ಬಿಡುಗಡೆಯನ್ನು ಪಡೆಯುವುದಿಲ್ಲ. ಸತ್ತವನಿಗೆ ಪುನಃ ಮರಣವೆ? ಅಂದರೆ ಕಾಮಕ್ರೋಧಾದಿಗಳಿಂದ ಬಿಡುಗಡೆ ಪಡೆದವನಿಗೆ ಪುನಃ ಮರಣವಿಲ್ಲ.

ಇಲ್ಲಿ ಮೃತ್ಯುಶಬ್ದಕ್ಕೆ ಬಂಧನದಿಂದ ಬಿಡುಗಡೆಯೆಂದರ್ಥ. ಮರಣ ಅಂದರೆ ಬಿಡುಗಡೆ.

೧೫ ಶಿವೋಽಶ್ವಃ ಕೇಶವಸ್ತಸ್ಯಪರ್ಯಾಣಮಾತ್ಮಭೂಸ್ತಥಾ |
ಪಾದಯಂತ್ರಂ ತತ್ರಯೋಗ್ಯಃ ಸಾದೀಕ ಇತಿಮೇವದ ||೧೪||

ಶಿವನು ಕುದುರೆ, ಕೇಶವನು ಪರ್ಯಾಣ (ಜೀನು ಮೊದಲಾದ ಉಪಕರಣ ಸಾಧನ) ಬ್ರಹ್ಮನು ಲಾಳ (ಗಮನಕ್ಕೆ ಸಾಧನವಾಗಿರುವವನು) ಇಲ್ಲಿ ಯೋಗ್ಯನಾದ ಸಾರಥಿ ಯಾರು ಹೇಳು ?

ಇದು ರೂಪಕ–ಶಿವನು ಪರತತ್ತ್ವ, ಕೇಶವನು ವಿಶ್ವರೂಪ, ಬ್ರಹ್ಮನು ಸೃಷ್ಟಿಕರ್ತ ಈ ವಿಶ್ವವನ್ನು ನಡೆತಕ್ಕವನು ಯಾರು?

೧೬ ಅನಾಹತಃ ಸ್ವಸ್ವರೂಪಃ ಶೂನ್ಯಸ್ಥೋ ವಿಗತಾಮಯಃ |
ಅನಾಮರೂಪವರ್ಣೋಽಜೋನಾದ ಬಿಂದ್ವಾತ್ಮಕೋಽಸ್ತಿ ಸಃ ||೧೬||

ಇದಕ್ಕೆ ಸವಾರ ಪರಮಶಿವನಲ್ಲದೆ ಬೇರೆ ಯಾರೂ ಅಲ್ಲ.
ಅನಾಹತಃ– ಯಾವುದರಿಂದಲೂ ಹೊಡೆಯಲ್ಪಡದೆ ಇರುವವನು.
ಸ್ವಸ್ವರೂಪಃ– ಸ್ವಯಂಪ್ರಕಾಶನು.
ಶೂನ್ಯಸ್ಥಃ– ಚಿದ್ರೂಪಿಯು.
ವಿಗತಾಮಯಃ– ನಿರ್ವಿಕಾರನು.
ಅನಾಮರೂಪವರ್ಣಃ– ನಾಮರೂಪಗಳಿಲ್ಲದವನು.
ನಾದಬಿಂದ್ವಾತ್ಮಕಃ– ನಾದ ಮತ್ತು ಬಿಂದು ಎಂಬ ಕಲೆಗಳಿಂದ ಕೂಡಿದವನು ಇವನೇ ಪರಮಶಿವನು.

ನಿರಾಕಾರವಾದ ಚಿತ್ತು ಸಾಕಾರವನ್ನು ಪಡೆಯುವಾಗ ಘೋಷ ಮತ್ತು ಆಕಾರವನ್ನು ಪಡೆಯುವಾಗ ನಾದ ಮತ್ತು ಬಿಂದು ಎಂಬ ಹೆಸರನ್ನು ಪಡೆಯುತ್ತದೆ.

೧೭ ಮಾಯಾಜಾಡ್ಯಂ ತಜ್ಜಡಂ ಬೋಧನೀರಂ
ಸಂಸೃತ್ಯಾಖ್ಯಂ ತದ್ಘನತ್ವಂ ಹಿಮಂ ಚ |
ಚಿತ್ಸೂರ್ಯೋಽಸ್ಮಿನ್ಪ್ರೋದಿತೇ ತ್ರೀಣಿ ಸದ್ಯೋ
ಜಾಡ್ಯಾನ್ಮುಕ್ತಂ ನೀರಮಾದ್ಯಂ ಶಿವಾಖ್ಯಂ ||೧೭||

ಸ್ಥೂಲವಾದ ಈ ವಿಶ್ವವು ಜಡವಾದ ಮಾಯೆಯಿಂದ ರೂಪುಗೊಂಡಿದೆ. ಜ್ಞಾನವೆಂಬ ನೀರಿನಿಂದ ಕೂಡಿದೆ. ಆ ನೀರು ಹೆಪ್ಪುಕಟ್ಟಿಕೊಂಡು ಸಂಸಾರವೆಂಬ ಮಂಜುಗಡ್ಡೆಯಾಗಿದೆ. ಚಿತ್ತೆಂಬ ಸೂರ್ಯನು ಆ ಮಂಜುಗಡ್ಡೆಯ ಮೇಲೆ ಬೆಳಗಲಾಗಿ ಜಡವಾದ ವಿಶ್ವ, ಹೆಪ್ಪುಕಟ್ಟಿಕೊಂಡಿರುವ ಜ್ಞಾನ, ಸಂಸಾರದಿಂದ ಕೂಡಿರುವ ಜೀವಾತ್ಮ(ತ್ರೀಣಿ) ಇವು ಮೂರೂ ಅಜ್ಞಾನವೆಂಬ ಜಾಡ್ಯದಿಂದ ಬಿಡುಗಡೆಯನ್ನು ಪಡೆದು ಮೂಲರೂಪದಿಂದಿದ್ದ ಶಿವನೆಂಬ ನೀರಾಗುತ್ತನೆ.

ಮಾಯೆಯಿಂದ ಕೆಳಗಿರುವ ಮೂವತ್ತು ತತ್ತ್ವಗಳು ಜಡವಾದವು ಗಳು. ಈ ಸ್ಥೂಲಪ್ರಪಂಚವೆಲ್ಲಾ ಜಡವಾದುದಾಗಿದೆ. ಈ ಜಡ ಪ್ರಪಂಚದ ಸಂಬಂಧದಿಂದ ತಿಳಿವಳಿಕೆಯೆಂಬ ನೀರೂ ಸ್ಥೂಲವಾಗಿ ಜಡತ್ವವನ್ನು ಪಡೆದಿದೆ. ಈ ಜಡಪ್ರಪಂಚವು ಸುಖದುಃಖಗಳಿಗೂ ಜನನ ಮರಣಗಳಿಗೂ ಆಶ್ರಯವಾಗಿರುವ ಸಂಸಾರವೆಂಬ ಮಂಜುಗಡ್ಡೆಯಾಗಿದೆ.

ನೀರು ಪಾಕವಿಶೇಷದಿಂದ ಗಟ್ಟಿಯಾಗಿ ಮಂಜುಗಡ್ಡೆಯಾಗಿದೆ. ಇದೇ ಮಂಜುಗಡ್ಡೆಯು ಸೂರ್ಯಕಿರಣಗಳ ಸಂಪರ್ಕದಿಂದ ಕರಗಿ, ಮರಳಿ ನೀರಾಗಿ, ಮೊದಲಿನ ರೂಪವನ್ನು ಪಡೆಯುವುದು ನಮ್ಮ ಅನು ಭವದಲ್ಲಿದೆ. ಈ ದೃಷ್ಟಾಂತವನ್ನು ಈ ವಿಶ್ವದ ಪರಿವರ್ತನೆಗಳ ಏರಿಳಿತ ಗಳಿಗೆ ಅನ್ವಯಿಸಿದೆ.

ಹೆಪ್ಪುಕಟ್ಟಿಕೊಂಡಿರುವ ಜ್ಞಾನ–ವಿಮರ್ಶೆಯಿಲ್ಲದ ಜ್ಞಾನ.

೧೮ ಜ್ಞಾತ್ವಾ ಸರ್ವಂ ಮೂಢವತ್ತಿಷ್ಠ ಸ್ವಸ್ಥಃ
ಶ್ರುತ್ವಾ ಸರ್ವಂ ಶ್ರೋತ್ರಹೀನೇನ ಭಾವ್ಯಂ।
ದೃಷ್ಟ್ವಾ ಸರ್ವಂ ತೂರ್ಣಮಂಧತ್ವಮೇಹಿ
ತತ್ತ್ವಾಭ್ಯಾಸಃ ಕೀರ್ತಿತೋಽಯಂ ಬುಧೇಂದ್ರೈಃ॥ ೨೦ ॥

ಎಲ್ಲವನ್ನೂ ತಿಳಿದುಕೊಂಡು ಶಾಂತನಾಗಿ ಮೂಢನಹಾಗಿರು. ಎಲ್ಲವನ್ನೂ ಕೇಳಿ ಕಿವುಡನಂತಿರು.

ಎಲ್ಲವನ್ನೂ ನೋಡಿ ಒಡನೆಯೇ ಕುರುಡನಹಾಗಿರು.

ತಿಳಿದವರು ಈ ರೀತಿಯಾದ ಸ್ಥಿತಿಯನ್ನು ತತ್ತ್ವಾಭ್ಯಾಸದಿಂದ ಪಡೆಯಬೇಕೆಂದು ಹೇಳಿರುತ್ತಾರೆ.

ಇದನ್ನೇ ಸಾಂಪ್ರದಾಯಿಕವಾಗಿ ಪ್ರತ್ಯಾಹಾರನೆಂದು ಹೇಳುವುದು

೧೯ ಪ್ರಸೂಪರಂ ಕ್ಲೇಶಯುತಂ ವಿಸೀಯ
ಜಾತೋ ಮಲಾಕ್ತೋಽಪ್ಯನುಯಾತಿ ಸಂತತಮ್ ।
ಯತ್ಪ್ರೇರಿತಃ ಸೌಖ್ಯಧಿಯಾ ನರಕಃ ಸ್ತ್ರೀಂ
ಕಷ್ಟೇನಲಭ್ಯಂ ಶೃಣು ತಂ ಗುರೋಃ ಶಿವಮ್ ॥ ೫೦ ॥

ಜೀವನು ಅನೇಕ ಕಷ್ಟಗಳಿಂದ ಕೂಡಿರುವ ತಾಯಿಯ ಹೊಟ್ಟೆ

ಯನ್ನು ಹೊಕ್ಕು ಅನೇಕ ಮಲಗಳಿಂದ ಕೂಡಿದ ಶರೀರದೊಡನೆ ಹುಟ್ಟಿದನು. ಅನಂತರ ಅದೇ ಮಲಿನವಾದ ಶರೀರದಿಂದಲೇ ಬೆಳೆಯುತ್ತಾನೆ. ಆ ಶಾರೀರಿಕವಾದ ಭಾವನೆಗಳಿಂದ ಪ್ರೇರಿತನಾಗಿ ಮರಳಿ ಸುಖವುಂಟಾಗುತ್ತದೆಂಬ ಬುದ್ಧಿಯಿಂದ ಹೆಂಗಸನ್ನು ಪಡೆಯುತ್ತಾನೆ. ಇಂತಹವನು ಆತ್ಮಸ್ವರೂಪವನ್ನು ತಿಳಿಯುವುದು ಕಷ್ಟ. ಜಿಜ್ಞಾಸುವೇ ಈ ವಿಷಯವನ್ನು ತಿಳಿ.

೩೦ ಸ್ಥಲೇ ಸ್ಥಲೇ ಸ್ವೈಃ ಕಿರಣೈರ್ಯಥಾ ರವಿಃ
ಪತತ್ಯಭೇದೇನ ಗೃಹೇಷುವಾಶ್ರಯಂ |
ಜಲಂ ತಥಾ ಸರ್ವಜಗದ್ಗೃಹೇಷು
ಕಷ್ಟೇನಲಭ್ಯಂ ಶೃಣು ತಂ ಗುರೋಃ ಶಿವಂ ॥ ೫೩ ॥

ಯಾವ ರೀತಿಯಲ್ಲಿ ಸೂರ್ಯನು ಭೇದವಿಲ್ಲದೆ ಎಲ್ಲಾ ಸ್ಥಳಗಳಲ್ಲಿಯೂ ಎಲ್ಲಾ ಮನೆಗಳಲ್ಲಿಯೂ ಕಿರಣಗಳಿಂದ ಪ್ರವೇಶಿಸುವನೋ ಅಥವಾ ಮೇಘವು ಅದೇ ರೀತಿಯಾಗಿ ಈ ಪ್ರಪಂಚದಲ್ಲಿ ನೀರನ್ನು ಸುರಿಸುತ್ತದೆಯೋ ಹಾಗೆಯೇ ಪರತತ್ತ್ವವು ಸರ್ವತ್ರ ಪಕ್ಷಪಾತವಿಲ್ಲದೆ ಇದೆ. ಎಲ್ಲಕ್ಕೂ ಆಶ್ರಯವಾಗಿದೆ. ಜಿಜ್ಞಾಸುವೇ ತಿಳಿ.

೩೧ ಮಾತೃಸ್ವರೂಪೇಣ ಪಯಃಪ್ರದಾಸು
ಭಾರ್ಯಾಸ್ವರೂಪೇಣ ವಿಲಾಸಕಾರಿಣೀ |
ಯಚ್ಛಕ್ತಿರಂತೇ ಮೃತಿರೂಪಮೇತಿ ಚ
ಕಷ್ಟೇನಲಭ್ಯಂ ಶೃಣು ತಂ ಗುರೋಃ ಶಿವಮ್ ॥ ೫೪ ॥

ಆ ಪರಮಾತ್ಮನ ಶಕ್ತಿಯು ತಾಯಿಯ ರೂಪದಿಂದ ಹಾಲುಕೊಡುವುದರ ಮೂಲಕ ಪೋಷಣೆಮಾಡುತ್ತದೆ ; ಹೆಂಡತಿಯ ರೂಪದಿಂದ ವಿಲಾಸವನ್ನುಂಟುಮಾಡುತ್ತದೆ. ಅದು ಕೊನೆಗೆ ಮೃತ್ಯುರೂಪವನ್ನು ತಾಳುತ್ತದೆ. ಹೀಗೆ ಪೋಷಣೆ, ವಿಲಾಸ, ಮರಣ ಇವು ಮೂರಕ್ಕೂ ಕಾರಣವಾಗಿರುವ (ಪರಸ್ಪರ ವಿರುದ್ಧವಾಗಿ ತೋರುವ) ಅನಂತಶಕ್ತಿಗಳನ್ನೊಳಗೊಂಡಿರುವ ಪರಮಾತ್ಮನನ್ನು ತಿಳಿಯುವುದು ಕಷ್ಟ.

## ಅಭ್ಯಾಸ–ಅನುಸಂಧಾನ

### (ಮೂರನೆಯ ಹಂತ)

೨೨ ಶೀಲಸ್ಯ ಮಾನಸ್ಯ ಚ ರಕ್ಷಣಂ ಭಟ್ಟೈ
ಸ್ತೈರೇವ ಶಕ್ಯಂ ನಿಪುಣಂ ವಿಧಾತುಂ |
ವಾಯುಂ ಕರೇಣಾಥ ಗಜಂ ಚ ತಂತುನಾ
ಯೈಃ ಶಕ್ಯತೆ ಸ್ತಂಭಯಿತುಂ ಸುಧೀರೈಃ || ೨೪ ||

ಗಾಳಿಯನ್ನು ಕೈಯಿಂದಲೂ ಆನೆಯನ್ನು ದಾರದಿಂದಲೂ ನಿಲ್ಲಿಸುವುದಕ್ಕೆ ಯಾರಿಗೆ ಸಾಧ್ಯವೋ ಅಂತಹ ಭಟರು ಶೀಲವನ್ನೂ ಮಾನವನ್ನೂ ಚೆನ್ನಾಗಿ ರಕ್ಷಿಸಬಲ್ಲರು.

ಶೀಲಂ ಸ್ವಭಾವೇಸದ್ವೃತೌ – ಸದಾಚಾರದಲ್ಲಿಯೂ ಸ್ವಭಾವದಲ್ಲಿಯೂ ಶೀಲಶಬ್ದವನ್ನು ಉಪಯೋಗಿಸುವರು.

೨೩ ಕೃದ್ಧಂ ಮನೋವಹ್ನಿಸಮಾನರೂಪಂ
ತಿರಸ್ಕೃತಂ ಭಾರನತಂ ವಿಭಾತಿ |
ವಿಚಾರತಃ ಸರ್ವವಿಕಾರ ಹೀನಂ
ವಿಶುದ್ಧ ಬೋಧೈಕ ಸ್ವರೂಪ ಮೇವ || ೨೩ ||

ಮಾನವನಿಗೆ ಮನಸ್ಸು ಎಲ್ಲಾ ವ್ಯವಹಾರಗಳಿಗೂ ಕಾರಣವಾಗಿರುವ ಸಾಧನ. ಕೋಪಗೊಂಡ ಮನಸ್ಸು ಬೆಂಕಿಯ ಹಾಗೆ ಉರಿದು ಮಾನವನ ಅಶಾಂತಿಗೂ ದುಃಖಕ್ಕೂ ಕಾರಣವಾಗುತ್ತದೆ. ಅವಮಾನಿಸಲ್ಪಟ್ಟರೆ ಭಾರದಿಂದ ಬಗ್ಗಿದಂತೆ ವ್ಯಸನವನ್ನನುಭವಿಸುತ್ತದೆ. ತತ್ತ್ವತಃ ವಿಚಾರಮಾಡಿದರೆ ಈ ಮನಸ್ಸು ಯಾವ ವಿಕಾರವೂ ಇಲ್ಲದ ಶುದ್ಧವಾದ ಜ್ಞಾನರೂಪವೇ ಆಗಿರುತ್ತದೆ.

೨೪ ಚಿತ್ತಾಭಿದಃ ಸರ್ವಗತಿಸ್ತುರಂಗಃ
ಕ್ಷಣಾಂತರೇ ಯೋಜನಲಕ್ಷಗಾಮೀ |
ಧಾರ್ಯೋಽಬುಧೇಂದ್ರೇಣ ವಿವೇಕವಲ್ಗಾ
ನೋದೇನ ವಾಯುದ್ವಯಪಕ್ಷರೋಧಾತ್ || ೨೬ ||

ಮನಸ್ಸೆಂಬ ಎಲ್ಲಾ ಕಡೆಗೂ ಓಡುವ ಕುದುರೆಯು ಕ್ಷಣಮಾತ್ರ

ದಲ್ಲಿಯೇ ಲಕ್ಷಾಂತರ ಯೋಜನ ದೂರ ಹೋಗುವುದಾಗಿದೆ. ವಿವೇಕ ವೆಂಬ ಕಡಿವಾಣದಿಂದ ಜ್ಞಾನಿಗಳಾದವರು ಪ್ರಾಣಾಪಾನವಾಯುಗಳನ್ನು ನಿಲ್ಲಿಸುವುದರ ಮೂಲಕ ಮನಸ್ಸನ್ನು ಹಿಡಿದು ನಿಲ್ಲಿಸಬೇಕು.

ವಲ್ಗಾ=ಕಡಿವಾಣ.

೨೫ ಖಾದನಾದ್ ಭೂಷಣಾದ್ವಾಪಿ ಮನೋಯಸ್ಯ ಗತಭ್ರಮವತ್ ।
ಸಮುಕ್ತೋ ನೋತ್ತಮರ್ಣಾದ್ಯೋ ಗೃಹ್ಣಾತ್ಯರ್ಥಂಹಿಸೋಽನೃಣಃ ॥೨೮॥

ಏನು ತಿಂದರೂ ಏನು ಭೂಷಣಗಳನ್ನಿಟ್ಟುಕೊಂಡರೂ ಯಾರ ಮನಸ್ಸು ಹಿಗ್ಗುವುದಿಲ್ಲವೋ ಅವನು ಮುಕ್ತ ಅಂದರೆ ಬಿಡುಗಡೆಯನ್ನು ಪಡೆದವನು. ಸಾಲಕೊಡುವವನಿಂದ ಸಾಲ ತೆಗೆದುಕೊಳ್ಳದೆ ಇರುವವನು. ಸಾಲವಿಲ್ಲದವನು.

ಪ್ರಕೃತಿ ಸಾಲ ಕೊಡುತ್ತದೆ. ಆಸೆ ಅದನ್ನು ತೆಗೆದುಕೊಳ್ಳುತ್ತದೆ. ಈ ಪ್ರಪಂಚವೆಲ್ಲಾ ಪ್ರಕೃತಿವಿಲಾಸ. ಮಾನವನ ಸುಖದುಃಖಗಳು ಪ್ರಕೃತಿಯನ್ನಾಶ್ರಯಿಸಿವೆ. ಪ್ರಕೃತಿಯ ಸೃಷ್ಟಿಯೆಲ್ಲಾ ಇವನ ಉಪ ಯೋಗಕ್ಕಾಗಿಯೇ ಇರುವುದರಿಂದ ಇವನು ಇದನ್ನು ಕುರಿತು ಆಸೆಪಡ ಬೇಕಾದ್ದಿಲ್ಲ. ಇವನ ಸಂಸ್ಕಾರಗಳಿಂದಲೂ ಪರಿಸ್ಥಿತಿಗಳಿಂದಲೂ ಒದಗಿ ದಷ್ಟು ಅನುಭವಿಸಬೇಕು. ಅದೇ ಶಾಂತಿಗೆ ಮಾರ್ಗ.

ಪ್ರಕೃತಿಯನ್ನು ನಾವು ಅನುಭವಿಸುತ್ತಾ ಇದ್ದೇವೆ. ಅದರಿಂದ ಸಂತಾಪ ಸಂತೋಷಗಳನ್ನು ಪಡೆದರೆ ನಾವು ಬುದ್ಧಿಪೂರ್ವಕವಾಗಿ ಅದನ್ನು ಅಪೇಕ್ಷಿಸಿದಂತಾಗುತ್ತದೆ. ಹಿಗ್ಗದೆ ಕುಗ್ಗದೆ ಉದಾಸೀನ ವಾಗಿದ್ದರೆ ನಾವು ಬಿಡುಗಡೆಯನ್ನು ಪಡೆದವರಂತಿರುತ್ತೇವೆ.

೨೬ ಶೀತಾರ್ಥಂ ವಸನಂ ಗ್ರಾಹ್ಯಂ ಕ್ಷುಧಾರ್ಥಂ ಭೋಜನಂ ತಥಾ ।
ಮನೋವಿವೇಕಿತಾಂ ನೇಯಮಲಂ ಭೋಗಾನುಚಿಂತನೈಃ ॥೨೯॥

ಚಳಿಯನ್ನು ಹೋಗಲಾಡಿಸುವುದಕ್ಕೆ ಎಷ್ಟು ಬೇಕೋ ಅಷ್ಟು ಬಟ್ಟೆಯನ್ನು ಹೊದೆಯಬೇಕು. ಹಸಿವನ್ನು ಹೋಗಲಾಡಿಸುವುದಕ್ಕೆ ಎಷ್ಟು ಬೇಕೋ ಅಷ್ಟು ಆಹಾರವನ್ನು ತೆಗೆದುಕೊಳ್ಳಬೇಕು. ಮನಸ್ಸನ್ನು

ವಿವೇಕದೊಡನೆ ಜೀವಾತ್ಮ ಪರಮಾತ್ಮ ವಿಚಾರಗಳಲ್ಲಿ ನಿಯೋಜಿಸಬೇಕು. ನಿನ್ನ ಶರೀರವು ಭೋಗಾದಿ ಸುಖಗಳಿಗೋಸ್ಕರವೇ ಇದೆಯೆಂದು ವಿಭ್ರಮ ಗೊಳ್ಳಬೇಡ.

೨೭ ಲೋಭಂ ತ್ಯಕ್ತ್ವಾ ವೈಮನಸ್ಯಂ ಚ ತದ್ವತ್
ಕಾರ್ಯೋನಿತ್ಯಂ ಸ್ವಸ್ವಭಾವಾವಮರ್ಶಃ |
ಶೂನ್ಯಾಚ್ಛೂನ್ಯಂ ನೈವಭಿನ್ನಂ ಯಥೈವಂ .
ತಸ್ಮಾತ್ತ್ವಂ ತದ್ಭೇದ ಬುದ್ಧಿರ್ವ್ಯಥೈವ ||೩೦||

ಲೋಭವನ್ನೂ ಶತ್ರುತ್ವವನ್ನೂ ಬಿಟ್ಟು ಹಾಗೆಯೇ ಸ್ವಸ್ವರೂಪಾನು ಸಂಧಾನವನ್ನು ಯಾವಾಗಲೂ ಮಾಡು. ಮಹಾಶೂನ್ಯರೂಪವಾಗಿರುವ ಚಿತ್ತು ಯಾವ ರೀತಿಯಾಗಿ ಅಭಿನ್ನವಾಗಿದೆಯೋ ಅದರಂತೆ ನೀನು ಭೇದಬುದ್ಧಿಯನ್ನು ಬಿಟ್ಟು ಅಭಿನ್ನವಾದ ಚಿತ್ತಿನೊಡನೆ ಏಕೀಭವಿಸು.

ಲಲ್ಲಾದೇವಿಯು 'ಶೂನ್ಯ'ಪದವನ್ನು ಅನೇಕಾವರ್ತಿ ಅಲ್ಲಲ್ಲಿ ಉಪಯೋಗಿಸಿದ್ದಾಳೆ. ಶೂನ್ಯಪದದ ಅರ್ಥ ಹೀಗಿದೆ ;

ನಮ್ಮ ಶರೀರದಲ್ಲಿ ಸೂರ್ಯನು ನಾಭಿಪ್ರದೇಶದಲ್ಲಿದ್ದು ಶಾಖದಿಂದ ಜೀರ್ಣಾದಿಕಾರ್ಯಗಳನ್ನೂ ಚಂದ್ರನು ಶಿರಃಪ್ರದೇಶದಲ್ಲಿದ್ದು ತಂಪಿನಿಂದ ಶರೀರಕ್ಕನುಕೂಲವಾದ ಅಮೃತವನ್ನು ಸುರಿಸುತ್ತಾನೆಂಬುದು ಯೋಗ ಸಂಪ್ರದಾಯದವರ ವಿವರಣೆ. ಜೀವಾತ್ಮನು ಯೋಗಾಭ್ಯಾಸದಿಂದ ಅಂದರೆ ಚಕ್ರಗಳಲ್ಲಿ ಮನಸ್ಸನ್ನು ನಿಲ್ಲಿಸಿ ಧ್ಯಾನಮಾಡುವುದರ ಮೂಲಕ ಚಿತ್ತವೊಂದೇ ಇರುವುದೆಂದು ತಿಳಿದು ಕೊನೆಗೆ ತೀವ್ರವಾದ ಯೋಗಾ ಭ್ಯಾಸದ ಫಲವಾಗಿ ಜೀವಾತ್ಮ ಪರಮಾತ್ಮರ ಐಕ್ಯದಲ್ಲಿದ್ದು ಚಿತ್ಪ್ರಕಾಶ ವನ್ನು ಹೊಂದುವನು. ಇಲ್ಲಿ ಪರಮಾವಸ್ಥೆಯ ಮುಂಚಿನ ಸ್ಥಿತಿಯನ್ನು ಶೂನ್ಯಾವಸ್ಥೆಯೆಂದು ಕರೆಯುತ್ತಾರೆ. ಇದು ಮನಸ್ಸು ನಷ್ಟವಾದ ಮೇಲೆ ಉಂಟಾಗುವ ಪರಿಸ್ಥಿತಿ. ಆಸೆಯನ್ನು ನಿರ್ಮೂಲಮಾಡಿ, ಹತ್ತು ನಾಡಿ ಗಳಲ್ಲಿ ಪ್ರವಹಿಸುವ ಪ್ರಾಣವಾಯುವನ್ನು ನಿರೋಧಿಸಿ, ಇಂದ್ರಿಯನಿಗ್ರಹ ದಿಂದ ಮನಸ್ಸನ್ನು ಗೆದ್ದು, ಸಂಸಾರವಲ್ಲಿರುವ ಚಂದ್ರನಿಂದ ಅಮೃತ ವನ್ನು ಸುರಿಸುವುದರ ಮೂಲಕ ಶೂನ್ಯಸ್ಥಿತಿಯನ್ನು ಪಡೆಯುವುದೆಂಬು

ದನ್ನು ಈ ಲಲ್ಲಾದೇವಿಯ ವಾಕ್ಯಗಳಲ್ಲಿ ಕಂಡುಬರುವ ಶೂನ್ಯವೆಂದೆನ್ನ ಬಹುದು.

೩೮ ಆ ಬ್ರಹ್ಮಾಂಡಂ ನಾಭಿಕೋಯೇನ ನಿತ್ಯ ಮೋಂಕಾರಾಖ್ಯೋಮಂತ್ರ
ಏಕೋಧೃತೋಽಯಂ।
ಕೃತ್ವಾಚಿತ್ತಂ ತದ್ವಿಮರ್ಶೈಕಸಾರಂ ಕಿಂ ತಸ್ಯಾನ್ಯೈರ್ಮಂತ್ರ
ವೃಂದೈರ್ವಿಧೇಯಂ ॥ ೩೩ ॥

ಯಾವ ಪರಮಾತ್ಮನಿಂದ ಈ ವಿಶ್ವವು ಹೊರಹೊಮ್ಮಿದೆಯೋ ಯಾವ ಪರಮಾತ್ಮನ ಮಹಿಮೆಯನ್ನು ಓಂಕಾರವೆಂಬ ಮಂತ್ರವು ಧರಿಸಿದೆಯೋ, ಯಾವ ಸಾಧಕನ ಮನಸ್ಸು ಈ ಸ್ಥೂಲ ಮತ್ತು ಸೂಕ್ಷ್ಮ ವಿಶ್ವಗಳನ್ನು ಸದಾ ವಿಮರ್ಶಿಸುತ್ತಿರುತ್ತದೆಯೋ ಅಂಥವನಿಗೆ ಬೇರೆ ಮಂತ್ರಗಳಿಂದ ಏನೂ ಆಗಬೇಕಾದುದಿಲ್ಲ.

ಬ್ರಹ್ಮನ ನಾಭಿಪ್ರದೇಶದಿಂದ ಈ ವಿಶ್ವವೆಲ್ಲಾ ಸೃಷ್ಟಿಯಾಗಿದೆ ಎಂದು ಪುರಾಣಕಥೆಗಳಿವೆ. ಶಬ್ದಗಳಿಗೆಲ್ಲಾ ಮೂಲ ಓಂಕಾರ. ಓಂಕಾರವೆಂಬ ಮಂತ್ರದಿಂದ ಈ ವಿರಾಟ್‌ಪುರುಷನು ಹೇಳಲ್ಪಡುತ್ತಾನೆ. ಸಂಕ್ಷೇಪವಾಗಿ ವಿಶ್ವವನ್ನು ನಾವು ಅನುಸಂಧಾನ ಮಾಡಬೇಕಾದರೆ ಈ ಬ್ರಹ್ಮಾಂಡವೆಲ್ಲಾ ವಾಚ್ಯ. ಪ್ರಣವವೇ ನಿಶ್ವಕ್ಕೆಲ್ಲಾ ವಾಚಕವಾಗಿರು ವುದು. ಹೀಗೆ ವಿರಾಡ್‌ರೂಪವನ್ನು ವಿರಾಡ್‌ಪುರುಷನನ್ನು ಯಾರ ಮನಸ್ಸು ಸದಾ ವಿಮರ್ಶಿಸುತ್ತದೆಯೋ ಅಂಥವನಿಗೆ ಬೇರೆ ಮಂತ್ರಗಳ ಅವಶ್ಯಕತೆ ಇರುವುದಿಲ್ಲ.

೩೯ ಯಃ ಪೂರಕೇಣ ಚಿತ್ತಂ ಸ್ವಂ ರೋಧಯೇತ್ ಕ್ಷುತ್ತೃಡಾದಿಕಮ್!
ನ ಪೀಡಯತಿ ಸಂಸಾರೆ ಸಫಲಂ ಚಾಸ್ಯಜೀವಿತಮ್ ॥೩೭॥

ಯಾವನು ಪ್ರಾಣಾಯಾಮ ಕ್ರಮದಿಂದ ತನ್ನ ಮನಸ್ಸನ್ನು ನಿಲ್ಲಿಸುವನೋ ಈ ಅಭ್ಯಾಸ ಪರಿಪಾಕದಿಂದ ಯಾವ ಸಾಧಕನಿಗೆ ಹಸಿವು ಮತ್ತು ಬಾಯಾರಿಕೆಗಳು ತೊಂದರೆಯನ್ನುಂಟುಮಾಡಲಾರವೋ ಅಂಥವನಿಗೆ ಸಂಸಾರದ ಉಬ್ಬರವಿಳಿತಗಳಿಂದ ತೊಂದರೆಯಾಗುವುದಿಲ್ಲ. ಅವನ ಜೀವಿತವು ಸಫಲವಾಗುತ್ತದೆ.

## ಪ್ರಾಣಾಯಾಮದಿಂದ ಮನಸ್ಸಿನ ಉದ್ವೇಗಗಳು ನಿಲ್ಲುತ್ತವೆ.

೩೦ ಯೋದ್ವಾದಶಾಂತೇ ಸ್ವಯಮೇವ ಕಲ್ಪಿತೇ
ಸದೋದಿತೇ ದೇವಗೃಹೇ ಸ್ವಯಂ ಸ್ಥಿತಃ |
ಸಂಪ್ರೇರಯನ್ ಪ್ರಾಣರವಿಂ ಸಶಂಕರೋ
ಯಸ್ಯಾತ್ಮಭೂತಃ ಸ ಕಮರ್ಚಯೇದ್ ಬುಧಃ ‖೩೫‖

ಯಾರು ತಾನೇ ನಿರ್ಮಿಸಿರುವ ಯಾವಾಗಲೂ ಪ್ರಕಾಶಮಾನವಾಗಿರುವ ಬ್ರಹ್ಮರಂಧ್ರವೆಂಬ ದೇವಮಂದಿರದಲ್ಲಿ ಬೆಳಗುತ್ತಾ ಪ್ರಾಣಶಕ್ತಿಯನ್ನು ಪ್ರೇರೇಪಿಸುತ್ತಲಿದ್ದಾನೋ ಆ ಶಂಕರನು ಯಾರಿಗೆ ಅಂತರ್ಯಾಮಿ ಅಥವಾ ಆತ್ಮಭೂತನಾಗಿದ್ದಾನೋ ಆ ಜ್ಞಾನಿಯು ಯಾರನ್ನು ಪೂಜೆಮಾಡಿಯಾನು !

ಧ್ಯಾನಕ್ಕೂ ಅನುಸಂಧಾನಕ್ಕೂ ಅನುಕೂಲವಾಗಿರುವುದಕ್ಕಾಗಿ ಪರಮಾತ್ಮನು ತಲೆಯಲ್ಲಿದ್ದಾನೆಂದು ಯೋಗಿಗಳು ಹೇಳುತ್ತಾರೆ. ಹೃದಯದಲ್ಲಿದ್ದಾನೆಂದು ಉಪನಿಷತ್ತುಗಳು ಹೇಳುತ್ತವೆ. ಹೃದಯದಲ್ಲಿ ಆತ್ಮ, ತಲೆಯಲ್ಲಿ ಮನಸ್ಸು, ಇದೆಯೆಂದು ಆಯುರ್ವೇದದವರು ಅಭಿಪ್ರಾಯಪಡುತ್ತಾರೆ. ಪರಮಾತ್ಮನು ಸರ್ವಾಂತರ್ಯಾಮಿ ಎಂದು ಆಧ್ಯಾತ್ಮಶಾಸ್ತ್ರಜ್ಞರ ಸಾಮಾನ್ಯ ನಿರ್ಣಯ. ಹಾಲಿನಲ್ಲಿ ಬೆಣ್ಣೆ ಇರುವ ಹಾಗೆ ಎಂದೂ ಮನೆಯಲ್ಲಿ ದೀಪದ ಕಾಂತಿ ತುಂಬಿರುವಂತೆ ಪ್ರಕಾಶಮಯನೆಂದೂ ಎಳ್ಳಿನಲ್ಲಿ ಎಣ್ಣೆ ಇರುವಂತೆ ಶರೀರದಲ್ಲಿ ಆತ್ಮನಿದ್ದಾನೆಂದೂ ಪುರಾಣಗಳು ಹೇಳುತ್ತವೆ. ಶಾಸ್ತ್ರಗಳಲ್ಲಿ ಕೊಟ್ಟಿರುವ ಉಪಮಾನಗಳು ಮತ್ತು ದೃಷ್ಟಾಂತಗಳು ಇವುಗಳನ್ನೂ ಯೋಗದವರ ಮತ್ತು ತಾಂತ್ರಿಕರ ಅಭಿಪ್ರಾಯಗಳನ್ನೂ ಮನಸ್ಸಿನಲ್ಲಿಟ್ಟುಕೊಂಡರೆ ಶಂಕರನು ತಲೆಯಲ್ಲಿದ್ದು ಪ್ರಾಣಶಕ್ತಿಯನ್ನು ಪ್ರೇರೇಪಿಸುವುದರ ಮೂಲಕ ಎಲ್ಲಾ ವ್ಯವಹಾರಗಳನ್ನೂ ನಡೆಸುತ್ತಿದ್ದಾನೆಂದು ಹೇಳಬಹುದು. ಈ ವಿಷಯಗಳನ್ನು ಸ್ಫುಟವಾಗಿ ತಿಳಿದು ವಿಶದವಾಗಿ ಸಾಕ್ಷಾತ್ಕರಿಸಿದರೆ ಅವನಿಗೆ ತಾನೇ ಶಿವನು ಎಂಬ ಭಾವನೆಯುಂಟಾಗುತ್ತದೆ. ಈ ಸ್ಥಿತಿಯನ್ನು ಮುಟ್ಟಿದ ಸಾಧಕನು ಪೂಜ್ಯ ಪೂಜಕಮಟ್ಟವನ್ನು ಮೀರಿರುವುದರಿಂದ ಯಾರನ್ನು ಪೂಜೆಮಾಡಿಯಾನು ?

ಸದೋದಿತೆ–ಹೃದಯದಿಂದ ಹೊರಟ ಅನಾಹತ ಶಬ್ದವಾದ ಓಂ ಎಂಬ ಮಂತ್ರದ ಮೂಲಕ ಶಿವನ ಆವಾಸಸ್ಥಾನವಾದ ಬ್ರಹ್ಮರಂಧ್ರ ವನ್ನು ಸೇರಬಹುದು.

೩೧ ಕಃ ಪೌಷ್ಪಿಕಃ ಕಾಪಿ ಚ ತಸ್ಯ ಪತ್ನೀ,
ಪುಷ್ಪೈಶ್ಚ ಕೈರ್ದೇವವರಸ್ಯ ಪೂಜಾ |
ಕಾರ್ಯಾತಥಾಕಿಂ ಗಡುಕಂ ವಿಧೇಯಂ
ಮಂತ್ರಶ್ಚ ಕಸ್ತತ್ರ ವದ ಪ್ರಯೋಜ್ಯಃ ||೩೯||

ಹೂವುಗಳನ್ನು ತರುವವನಾರು. ಅವನ ಹೆಂಡತಿ ಯಾರು. ಯಾವ ಹೂಗಳಿಂದ ಯಾವ ದೇವರ ಪೂಜೆಮಾಡಬೇಕು. ಏನು ನೈವೇದ್ಯಕ್ಕಿಡಬೇಕು. ಯಾವ ಮಂತ್ರವನ್ನು ಹೇಳಬೇಕು. ಇವೆಲ್ಲವೂ ಅಭೇದಭಾವನೆಯುಳ್ಳವರಿಗೆ ಆಶ್ಚರ್ಯವನ್ನುಂಟುಮಾಡುವುದಿಲ್ಲವೆ?

೩೨ ಇಚ್ಛಾ ಮನೋಭ್ಯಾಂ ನನು ಪೌಷ್ಪಿಕಾಭ್ಯಾ
ಮಾದಾಯಪುಷ್ಪಂ ದೃಢ ಭಾವನಾಖ್ಯಂ |
ಸ್ವಾನಂದ ಪೂರೈರ್ಗಡು ಕಂಚ ದತ್ವಾ
ಮೌನಾಖ್ಯ ಮಂತ್ರೇಣ ಸಮರ್ಚಯೇಚ್ಛಿವಮ್ ||೪೦||

ಮನಸ್ಸೆಂಬ ಗಂಡಸು ಇಚ್ಛೆಯೆಂಬ ಹೆಂಗಸು ಹೂವಿನ ಗೊಂಚಲು ಗಳನ್ನು ತೆಗೆದುಕೊಂಡು ದೃಢಭಾವನೆಯಿಂದ ಪೂಜಿಸುತ್ತಾರೆ. ಸ್ವರೂಪಾ ನಂದ ಅಥವಾ ಚಿದಾನಂದವೆಂಬ ನೈವೇದ್ಯವನ್ನು ಅರ್ಪಿಸುತ್ತಾರೆ. ಹಾಗೆಯೇ ಮೌನವೆಂಬ ಮಂತ್ರದಿಂದ ಧ್ಯಾನಿಸುತ್ತಾರೆ. ಈ ರೀತಿಯಾಗಿ ಶಿವನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ.

ಮೌನಮಂತ್ರವನ್ನು ಅಜಪಮಂತ್ರವೆಂತಲೂ ಕರೆಯುತ್ತಾರೆ. ಉಚ್ಚರಿಸುವುದಕ್ಕೆ ಭಾಷೆಯಿಲ್ಲದ್ದು ಮೌನಮಂತ್ರ. ಮೌನಮಂತ್ರ ವನ್ನು ಉಚ್ಛ್ವಾಸ ನಿಶ್ವಾಸಗಳಿಂದಲೇ ಸಾಧಿಸುವುದು. ಇದನ್ನು ಹಂಸ ವೆಂದೂ ಹೇಳುತ್ತಾರೆ. 'ಸೋಹಂ' ಎನ್ನುವುದೇ ತಿರುಗ ಮುರುಗಾಗಿ 'ಹಂಸ'ವಾಗಿದೆ. ಜೀವಾತ್ಮನಿಂದ ಬೇರೆಯಲ್ಲದಿರುವ ಸಹಸ್ರಾರದಲ್ಲಿರುವ ಪರಮಶಿವನಿಗೆ 'ಹಂಸ' ಎಂದು ಸಂಬೋಧಿಸುತ್ತಾರೆ. ಈ ಪದವನ್ನು

'ಪರಮಹಂಸ' ಎನ್ನುವ ಅರ್ಥದಲ್ಲಿಯೂ ಪ್ರಯೋಗಿಸುತ್ತಾರೆ. 'ಅಜಪ' ಎಂತಲೂ ಹೇಳುತ್ತಾರೆ. ಅಜಪ ಅಥವಾ ಹಂಸ ಎನ್ನುವುದು ಶ್ವಾಸ ಪ್ರಶ್ವಾಸಗಳು. ೬೦ ಶ್ವಾಸಗಳು=ಒಂದು ಪ್ರಾಣ. ೬೦ ಪ್ರಾಣಗಳು= ಒಂದು ನಾಡಿ. ೬೦ ನಾಡಿಗಳು=ಒಂದು ಅಹೋರಾತ್ರ. ಹೀಗೆ ಲೆಕ್ಕ ಮಾಡಿದರೆ ಒಂದು ಹಗಲು ರಾತ್ರಿಯಲ್ಲಿ ೨೧೬೦೦ ಶ್ವಾಸಪ್ರಶ್ವಾಸಗಳು ಅಥವಾ ಹಂಸಜಪಗಳಿವೆಯೆಂದು ಗೊತ್ತಾಗುತ್ತದೆ.

೪೭ ಪುಷ್ಪಾದಿಕಂ ದ್ರವ್ಯಮಿದಂ ನತಸ್ಯ
ಪೂಜಾಸು ಸರ್ವಮುಪಯೋಗಿ ಕಿಂಚಿತ್ ।
ಗುರೂಪದೇಶಾದ್ ದೃಢಯಾಚಭಕ್ತ್ಯಾ
ಸ್ಮೃತ್ಯಾರ್ಚ್ಯತೇಯೇನ ವಿಶುದ್ಧ ಆತ್ಮಾ ॥೪೫॥

ಆ ಪರಮಾತ್ಮನ ಪೂಜೆಗೆ ಹೂ ಮೊದಲಾದ ಪೂಜಾದ್ರವ್ಯಗಳಾವುವೂ ಅತ್ಯಾವಶ್ಯಕವಾದುವುಗಳಲ್ಲ. ಗುರೂಪದೇಶದಿಂದಲೂ ದೃಢವಾದ ಭಕ್ತಿಯಿಂದಲೂ ಎಡೆಬಿಡದ ಅನುಸಂಧಾನದಿಂದಲೂ ವಿಶುದ್ಧಾತ್ಮನಾದ ಪರಮಾತ್ಮನನ್ನು ಧ್ಯಾನಪೂರ್ವಕವಾಗಿ ಪೂಜಿಸಲ್ಪಡುವುದೇ ಮುಖ್ಯವಾದದ್ದು.

೪೮ ಸರೋವರೇ ಯತ್ರ ನ ಸರ್ಷಪಸ್ಯ
ಕಣೋऽಪಿ ಮಾತ್ಯೇವ ವಿಚಿತ್ರಮೇತತ್ ।
ನಿವರ್ತತೇ ತತ್ಪಯಸಾ ಸಮಸ್ತಂ
ಯಾವತ್ಪ್ರಮಾಣಂ ಖಲು ದೇಹಿ ಜಾತವ್ ॥ ೪೭ ॥

ಸಾಸುವೆಕಾಳು ಹಿಡಿಸುವಷ್ಟು ಸ್ಥಳವಿಲ್ಲದ ಅತಿ ಚಿಕ್ಕ ಸರೋವರ (ತಾಯಿಯ ಮೊಲೆ)ದಿಂದಲೇ ಈ ಪ್ರಪಂಚದ ಸಮಸ್ತವೂ ಪೋಷಿತವಾಗಿ ಬೆಳೆದಿದೆ. ಜೀವಾತ್ಮನು ಹಿಂದೆಯೂ ಈಗಲೂ ಮುಂದೆಯೂ ಹೀಗೆಯೇ ಜನ್ಮಗಳನ್ನು ಪಡೆಯುತ್ತಾ ಹೋಗುತ್ತಿದ್ದಾನೆ. ಇದು ವಿಚಿತ್ರವಾದದ್ದು.

೪೯. ವಾರತ್ರಯಂ ನೀರಮಯಂ ಸ್ಮರಾಮಿ
ತಥೈಕದಾಹಮವಕಾಶಹೀನಮ್ ।
ಆಕಾಶ ಮನ್ಯಾನ್ಯಪಿ ಚಾದ್ಭುತಾನಿ
ಸ್ಮರಾಮಿ ಶೂನ್ಯಂ ಖಲು ಸಪ್ತವಾರವ್ ॥ ೫೦ ॥

ಅಂತರಂಗವನ್ನು ಪರಿಶುದ್ಧಗೊಳಿಸುವ ಪವಿತ್ರವನ್ನಾಗಿಮಾಡುವ ಮೂರು ಸರೋವರಗಳನ್ನೂ ಕರಣಗಳನ್ನೂ ಯಾವಾಗಲೂ ನೆನೆಯುತ್ತೇನೆ; ವಿಮರ್ಶಿಸುತ್ತೇನೆ. ಹಾಗೆಯೇ ಅನಂತವಾದ ಚಿದಾಕಾರವನ್ನು ಒಂದುಸಾರಿ ಸ್ಮರಿಸುತ್ತೇನೆ. ಅದೇ ರೀತಿ ಈ ವಿಶ್ವದ ಅದ್ಭುತಗಳನ್ನು ಪರಿಶೀಲಿಸುತ್ತೇನೆ. ಇವೆಲ್ಲಕ್ಕಿಂತಲೂ ಮುಖ್ಯವಾಗಿ ಶುದ್ಧ ಚಿನ್ಮಾತ್ರಸ್ಥಿತಿಯುಳ್ಳ, ಸಪ್ತ ಭೂಮಿಕೆಗಳನ್ನು ಅನುಸಂಧಾನಮಾಡುತ್ತೇನೆ.

ಮೂರು ಕರಣಗಳು—ಮನಸ್ಸು, ವಾಕ್ಕು, ಕರ್ಮ.
ಸಪ್ತ ಭೂಮಿಕೆಗಳು—ಸಪ್ತ ಪ್ರಮಾತೃಗಳು.
ಏಕದಾ—ಆಕಾಶ ಶೂನ್ಯ—ನಿರಾಕಾರವಾದ ಚಿತ್ತು.

ಇಡಾ ಪಿಂಗಳಾ ಸುಷುಮ್ನಾ ಇವುಗಳಿಗೆ ಗಂಗಾ ಯಮುನಾ ಸರಸ್ವತಿ ನದಿಗಳೆಂದು ಸಾಂಪ್ರದಾಯಿಕವಾಗಿ ಹೇಳುತ್ತೇವೆ. ಶಿವನು ಕಾಶಿಯಲ್ಲಿದ್ದಾನೆಂದು ಹೇಳುತ್ತೇವೆ. ಇಲ್ಲಿ ಕಾಶಿಯೇ ಬ್ರಹ್ಮರಂಧ್ರ. ಪ್ರಯಾಗದಲ್ಲಿ ಗಂಗಾ ಯಮುನಾನದಿಗಳ ಸಂಗಮ. ಸರಸ್ವತಿ ಗುಪ್ತಗಾಮಿನಿ. ಗಂಗಾ ಯಮುನೆಗಳೇ ಇಡಾ ಪಿಂಗಳಗಳು. ಸರಸ್ವತಿಯೇ ಸುಷುಮ್ನಾ. ಇವು ಮೂರೂ ಸೇರಿದರೇನೇ ಸುಷುಮ್ನಾ ವಿಕಾಸವೆಂದು ಯೋಗದ ವಿವರಣೆ—ಸುಷುಮ್ನಾವಿಕಾಸ ಬ್ರಹ್ಮರಂಧ್ರದಲ್ಲಿ.

ಇದೊಂದು ರೂಪಕ. ಈ ರೂಪಕದೃಷ್ಟಿಯಿಂದ ಈ ವಚನದಲ್ಲಿ ಕಾಶ್ಮೀರ ಪ್ರಾಂತದ ವರ್ಣನೆಯಿದೆ. ಈ ಸಂಬಂಧವಾಗಿ ಒಂದು ಜಾನಪದದ ಕಥೆಯೂ ಇದೆಯಂತೆ. ಈ ರೂಪಕದಲ್ಲಿ ಮೇಲೆ ಹೇಳಿದ್ದನ್ನು ಕಾಶ್ಮೀರದೇಶದ ವರ್ಣನೆಗಳೊಡನೆ ಊಹಿಸಿಕೊಳ್ಳಬಹುದು.

೩೭ ಯಥಾ ಶಿಲ್ಪೈಕ್ಯೈವ ಸ್ವಜಾತಿ ಭೇದಾತ್
ಪೀಠಾದಿ ನಾನಾವಿಧ ರೂಪ ಭಾಗಿನೀ ।
ತಥೈವ ಯೋಽನಂತತಯಾ ವಿಭಾತಿ
ಕಷ್ಟೇನ ಲಭ್ಯಂ ಶೃಣು ತಂ ಗುರೋಃ ಶಿವಮ್ ॥ ೫೨ ॥

ಯಾವ ರೀತಿ ಕಲ್ಲುಕಟ್ಟಡವು ತನ್ನ ಜಾತಿಭೇದದಿಂದ—ಕಲ್ಲು, ಚಪ್ಪಡಿ, ತೊಲೆ, ವಿಗ್ರಹ, ರತ್ನ, ವಜ್ರ ಮೊದಲಾದ ಭೇದಗಳಿಂದ—ಬೇರೆ ಬೇರೆ ಕೆಲಸಗಳಿಗೆ ಅನುವಾಗುತ್ತದೆಯೋ ಹಾಗೆಯೇ ಒಂದೇ

ಒಂದಾದ ಪರವಸ್ತುವು ಅನಂತವಾದ ಭೇದರೂಪಗಳುಳ್ಳ ಈ ವಿಶ್ವರೂಪ ದಿಂದ ಪ್ರಕಾಶಿಸುತ್ತಲಿದೆ. ಇಂತಹ ಪರವಸ್ತುವನ್ನು ಕೇವಲ ಉಪದೇಶ ಗಳಿಂದಲೇ ತಿಳಿಯುವುದು ಕಷ್ಟ—ಜಿಜ್ಞಾಸುವೆ ತಿಳಿ.

೩೭ ಗೃಹೇ ನಿವಾಸೋ ನ ವಿಮೋಕ್ಷ ಹೇತು
ರ್ವನೇಽಥ ವಾ ಯೋಗಿವರ್ಯೈಃ ಪ್ರತಿಷ್ಠಃ ।
ದಿವಾ ನಿಶಂ ಸ್ವಾತ್ಮವಿಮರ್ಶನಾಖ್ಯೋ
ಯಥಾ ಸ್ಥಿತಸ್ತ್ವಂ ಪರಮೋಽತ್ಸ್ಯುಪಾಯಃ ॥ ೫೫ ॥

ಮನೆಯಲ್ಲಿ ವಾಸಮಾಡುವುದೂ ಮೋಕ್ಷಕ್ಕೆ ಕಾರಣವಲ್ಲ. ಕೆಲವು ಶ್ರೇಷ್ಠರಾದ ಯೋಗಿಗಳು ಹೇಳುವಂತೆ ಕಾಡಿನಲ್ಲಿ ವಾಸಮಾಡುವುದೂ ಮೋಕ್ಷಕ್ಕೆ ಕಾರಣವಲ್ಲ. ರಾತ್ರಿ ಹಗಲೂ ಸ್ವಸ್ವರೂಪ ವಿಮರ್ಶನೆಯೇ ಮುಖ್ಯವಾದ ಕಾರಣ. ಅದೇ ತಾತ್ವಿಕವಾದದ್ದು. ಅದೇ ಪರಮೇಶ್ವರನ ಸಾಕ್ಷಾತ್ಕಾರಕ್ಕೆ ಉಪಾಯವು.

೩೮ ನಾಭ್ಯುತ್ಥಿತೋ ಹಾಹೂ ಜಠರಾಗ್ನಿತಪ್ತೋ
ಹೂಹ್ ದ್ವಾದಶಾಂತಾಚ್ಛಿಶಿರಾತ್ಸಮುತ್ಥಃ ।
ಹಾಹೂ ಪ್ರಾಣಭೂತೋಽಸ್ತ್ಯಥ ಹೂಹ್ ಅಪಾನಃ
ಸಿದ್ಧಾಂತ ಏವಂ ಮುನಿಭಿಃ ಪ್ರದಿಷ್ಟಃ ॥ ೫೭ ॥

ನಾಭಿಯಿಂದ ಹೊರಟಿರುವುದೂ ಜಠರಾಗ್ನಿಯಿಂದ ಬಿಸಿಯಾಗಿರು ವುದೂ ಅಪಾನವಾಯು. ಬ್ರಹ್ಮರಂಧ್ರದಿಂದ ತಣ್ಣಗಿರುವ ಚಂದ್ರಸ್ಥಾನ ದಿಂದ ಹೊರಡುವುದು ಪ್ರಾಣವಾಯು. ಹೀಗೆ ಪ್ರಾಣಾಪಾನ ವಿವೇಚನೆ ಯನ್ನು ತಿಳಿದಿರುವವರು ಹೇಳಿದ್ದಾರೆ.

ಚಂದ್ರನು ಮೇಲೆ ತಲೆಯಲ್ಲಿಯೂ ಸೂರ್ಯನು ಕೆಳಗೆ ನಾಭಿ ಪ್ರದೇಶದಲ್ಲಿಯೂ ಇದ್ದಾನೆಂಬುದು ಯೋಗ ಸಂಪ್ರದಾಯದವರ ವಿವರಣೆ. ಇದನ್ನೇ ಪ್ರಾಣಾಪಾನ (ಚಂದ್ರ ಸೂರ್ಯ) ಎಂದು ಹೇಳುವುದು. ಪ್ರಾಣಾಪಾನಗಳನ್ನು ನಿಲ್ಲಿಸಿದರೆ ಸುಷುಮ್ನಾನಾಡಿಯು ವಿಕಸಿಸುತ್ತದೆ ಎಂಬುದು ಯೋಗದವರ ನಿಶ್ಚಯ—ಕುಂಡಲಿನೀ ಚಾಲನ ಎಂದರೂ ಇದೇ.

೩೯ ಕರೋಮಿ ಯತ್ಕರ್ಮ ತದೇವ ಪೂಜಾ
ವದಾನಿ ಯಚ್ಚಾಪಿ ತದೇವ ಮಂತ್ರಃ ।
ಯದೇವ ಚಾಯಾತಿ ತಥೈವ ಯೋಗಾದ್
ದ್ರವ್ಯಂ ತದೇವಾಸ್ತಿ ಮಮಾತ್ರತಂತ್ರವತ್ ॥ ೩೮ ॥

ನಾನು ಯಾವ ಕೆಲಸಗಳನ್ನು ಮಾಡುತ್ತೇನೆಯೋ ಆ ಕೆಲಸಗಳೆಲ್ಲವೂ ಪೂಜೆಯೇ. ಉಚ್ಚರಿಸುವುದೆಲ್ಲವೂ ಮಂತ್ರವೇ. ಯಾವ ಯಾವುವು ಕಾಲ ಕರ್ಮಸಂಯೋಗದಿಂದ ಲಭಿಸುತ್ತವೆಯೋ ಅವೆಲ್ಲವೂ ಪೂಜಾ ದ್ರವ್ಯಗಳೇ. ಯಾವ ರೀತಿ ಪ್ರಪಂಚವ್ಯವಹಾರವನ್ನು ನಡೆಸುತ್ತೇನೆಯೋ ಅದೆಲ್ಲವೂ ತಂತ್ರವೇ.

ಜ್ಞಾನಿಯ ಎಲ್ಲಾ ವ್ಯಾಪಾರಗಳೂ ಯಜ್ಞರೂಪವಾಗಿರುವುವೆಂದು ಉಪನಿಷತ್ತುಗಳಲ್ಲಿ ವರ್ಣನೆಗಳಿವೆ. ಮೇಲೆ ವಿವರಿಸಿರುವವುಗಳೆಲ್ಲವೂ ಪ್ರಾಣಾಪಾನ ವಿವೇಚನೆಯ ತಿಳಿವಳಿಕೆ ಮತ್ತು ಅನುಭವಗಳಿಂದ ಸಿದ್ಧಿಯನ್ನು ಪಡೆದಿರುವವರು ಹೇಳುವ ಮಾತುಗಳು.

೪೦ ಯದೇವಷಟ್ಕಂ ತೇದೇವ ತದೇವ ಚ ಮಮ ಪ್ರಭೋ ।
ನಿಯೋಕ್ತಾತ್ವಂ ನಿಯೋಜ್ಯಾಹಂ ತಸ್ಯಾಸ್ತೀತ್ಯಾವಯೋರ್ಭಿದಾ ॥ ೧೩ ॥

ಪ್ರಭುವೇ, ನೀನೂ ನಾನೂ ಒಂದೇ. ನಿನಗೆ ಯಾವ ಆರು ಶಕ್ತಿಗಳಿವೆಯೋ ನನಗೂ ಅದೇ ಆರು ಶಕ್ತಿಗಳಿವೆ. ನೀನು ನಡೆಯಿಸುವವನು. ನಾನು ನಡೆಯುವವಳು. ಈ ವಿಧವಾದ ವ್ಯತ್ಯಾಸವೇ ನಮ್ಮಿಬ್ಬರಿಗೂ ಇರುವ ಭೇದ.

| ಷಟ್ಕ | | | | | | |
|---|---|---|---|---|---|---|
| | ಸರ್ವಜ್ಞತ್ವ, | ಸರ್ವಕರ್ತೃತ್ವ, | ಪೂರ್ಣತ್ವ, | ನಿತ್ಯತ್ವ, | ವ್ಯಾಪಕತ್ವ, | ಸತ್ವ |
| | ವಿದ್ಯಾ | ಕಲಾ | ರಾಗ | ಕಾಲ | ನಿಯತಿ | ಸತ್ವ |

ಸತ್ ಎರಡರಲ್ಲಿಯೂ ಒಂದೇ

ಈ ಆರು ಶಕ್ತಿಗಳು ಜೀವಾತ್ಮನಲ್ಲಿ ಸಂಕುಚಿತವಾಗಿವೆ.

೪೧ ಚೈತ್ಯಂ ದೇವೋ ನಿರ್ಮಿತೌ ದ್ವೌ ತ್ವಯಾಯೌ
ಪೂಜಾಹೇತೋರೇಸೌ ಶಿಲಾತೋ ನ ಭಿನ್ನೌ ।
ದೇವೋಽಮೇ ಯಶ್ಚಿತ್ಸ್ವರೂಪೋ ವಿಧೇಯಂ
ತದ್ವಾಯುಸ್ಪರ್ಶಂ ಪ್ರಾಣ ಚಿತ್ತೈಕ್ಯಮೇನ ॥ ೧೭ ॥

ಮನಸ್ಸಿನಿಂದ ತಿಳಿಯಲ್ಪಡತಕ್ಕ ವಸ್ತುಗಳೂ (ಚೈತ್ಯಂ) ಲೀಲೆಯಿಂದ ಅನೇಕ ರೂಪಗಳನ್ನು ಪಡೆದಿರುವ ಚಿತ್ತೂ (ದೇವಃ)—ಅಂದರೆ 'ಗ್ರಾಹ್ಯ ಗ್ರಾಹಕಗಳೆರಡೂ—ಪೂಜೆಮಾಡತಕ್ಕ ವಸ್ತುವೂ ಪೂಜೆಮಾಡುವವನೂ ಇವೆರಡೂ—ಪೂಜೆಗೋಸ್ಕರ ಶಿಲೆಯಿಂದ ಬೇರೆಯಾಗದಿರುವ ಹಾಗೆ ನಿನ್ನಿಂದ ನಿರ್ಮಿಸಲ್ಪಟ್ಟಿವೆ. ಪ್ರಾಣಶಕ್ತಿಯ ವ್ಯಾಪಾರವನ್ನು ತಡೆದು ಚಿತ್ತದಲ್ಲಿ ಲಯಮಾಡಿದರೆ ಇವುಗಳ ಐಕ್ಯವು ಸಾಕ್ಷಾತ್ಕೃತವಾಗುತ್ತದೆ.

ಇಲ್ಲಿ ಪೂಜ್ಯ ಪೂಜಕಭಾವವೇರ್ಪಟ್ಟಿದೆ. ದೇವನು ಪೂರ್ತಿಯಾಗಿ ತಿಳಿಯಲಿಕ್ಕಾಗದೆ ಇರುವವನು ಅಜ್ಞೇಯನು ಚಿತ್ಸ್ವರೂಪನು; ಆದರೂ ತಿಳಿಯಬೇಕಾಗಿರುವವನು—ವಿಧೇಯ. ಇಲ್ಲಿ ಶಿಲಾ ಎಂದರೆ ಜಡಪ್ರಪಂಚ. ಪೂಜೆ ಮಾಡತಕ್ಕ ವಸ್ತುವು ಮತ್ತು ಪೂಜೆ ಮಾಡುವವನು ಎರಡೂ ಒಂದೇ. ಪ್ರಾಣಶಕ್ತಿಯ ವ್ಯಾಪಾರವನ್ನು ತಡೆದು ಚಿತ್ತವಲ್ಲಿ ಲಯಮಾಡಿದರೆ ಆಗ ಇವೆರಡರ ಐಕ್ಯವು ಸಾಕ್ಷಾತ್ಕೃತವಾಗುತ್ತದೆ. ಆ ಪರಮಾತ್ಮ ವ್ಯಾಪ್ತಿಯನ್ನು ಪಡೆಯಲಿಕ್ಕೆ ಪ್ರಾಣ ಶಕ್ತಿ ಮತ್ತು ಚಿತ್ತಗಳ ಐಕ್ಯವೇರ್ಪಡಬೇಕು.

## ಅನುಭವೋದಯ

### ( ನಾಲ್ಕನೆಯ ಹಂತ )

೪೩ ಆತ್ಮಾ ಪರೋಽದಿನಂ ರಾತ್ರಿರ್ಯಸ್ಯ ಸರ್ವಮಿದಂ ಸಮಂ ।
ಭಾತಮದ್ವೈತ ಮನಸಸ್ತೇನ ದೃಷ್ಟೋಽಮರೇಶ್ವರಃ ॥ ೫ ॥

ತಾನೂ ಮತ್ತು ಇತರರೂ, ಸುಖ ಮತ್ತು ದುಃಖಗಳೂ ಒಂದೇ ಒಂದು ಯಾರಿಗೆ ಸಮಾನವಾಗಿ ಅಭಿನ್ನವಾಗಿ ಅನುಭವಕ್ಕೆ ಬರುತ್ತದೆಯೋ ಅಂತಹ ಸಾಧಕನಿಗೆ—ಅದ್ವೈತಭಾವನೆ ಮನಸ್ಸುಳ್ಳ ಜೀವನಿಗೆ ಅಮರೇಶ್ವರನು ಸಾಕ್ಷಾತ್ಕೃತವಾಗುವನು.

೪೪ ಭಾನೌನಷ್ಟೇ ಕಾಶತೇ ಚಂದ್ರಬಿಂಬಂ
ತಸ್ಮಿನ್ನಷ್ಟೇ ಕಾಶತೇ ಚಿತ್ತಮೇವ ।
ಚಿತ್ತೇನಷ್ಟೇ ಪೃಶ್ನಜಾತಂ ಕ್ಷಣೇನ
ಪೃಥ್ವ್ಯಾದೀದಂ ಗಚ್ಛತಿಕ್ವಾಪಿ ಸರ್ವಮ್ ॥ ೬ ॥

ಸೂರ್ಯಾಸ್ತಮಯುವಾದ ನಂತರ ಚಂದ್ರಬಿಂಬವು ಬೆಳಗುತ್ತದೆ. ಆ ಚಂದ್ರನು ಅಸ್ತಂಗತನಾದರೆ ಮನಸ್ಸೊಂದೇ ಕಂಗೊಳಿಸುತ್ತದೆ. ಮನಸ್ಸು ನಾಶವಾದರೆ ಈ ಭೂಮಿಯೇ ಮೊದಲಾದ ಕಣ್ಣಿಗೆ ಕಾಣಿಸುವ ಎಲ್ಲಾ ಪದಾರ್ಥಗಳೂ ಒಂದು ಕ್ಷಣದಲ್ಲಿ ಎಲ್ಲಿಯೋ ಕಾಣಿಸದೆ ಹೋಗಿ ಬಿಡುತ್ತವೆ. ಅಂದರೆ ಪ್ರಪಂಚದ ವಸ್ತುಗಳಿಂದ ಇವನಿಗೆ ಯಾವ ವಿಧವಾದ ತೊಂದರೆಯೂ ಇರುವುದಿಲ್ಲ.

ಪಾರಿಭಾಷಿಕವಾಗಿ ಹೇಳುವುದಾದರೆ ಬಾಹ್ಯೇಂದ್ರಿಯಗಳಿಂದ ಉಂಟಾಗುವ ಜ್ಞಾನದಿಂದ ಜಾಗ್ರದವಸ್ಥೆಯಲ್ಲಿ ಎಲ್ಲವನ್ನೂ ನಾವು ಅನುಭವಿಸುತ್ತೇವೆ. ಇದನ್ನು ಮೀರಿರುವುದು ಕೇವಲ ಮಾನಸಿಕ ಅನುಭವ. ಮಾನಸಿಕ ಅನುಭವದವರೆಗೂ ಭೇದಜ್ಞಾನದ ಪ್ರಪಂಚ ವಿರುತ್ತದೆ. ಮನಸ್ಸನ್ನು ದಾಟಿದರೆ ಚಿದನುಭವವುಂಟಾಗುತ್ತದೆ. ಅದು ಅಭಿನ್ನವಾದದ್ದು. ಅಲ್ಲಿ ವೃತ್ತಿಭೇದಗಳಿಗೆ ಅವಕಾಶವಿಲ್ಲ. ಇಲ್ಲಿ ಚಂದ್ರ ಸೂರ್ಯರು ನಮ್ಮ ಶರೀರದಲ್ಲಿರುವ ಮೇಲಿನ ಮತ್ತು ಕೆಳಗಿನ ಚಕ್ರ ಗಳನ್ನು ಸೂಚಿಸುತ್ತವೆ. ತೀವ್ರವಾದ ಯೋಗಾಭ್ಯಾಸದಿಂದ ಇವೆರಡೂ ನಾಶವಾಗಿಹೋದರೆ ಬಾಹ್ಯೇಂದ್ರಿಯಜ್ಞಾನವು ಹೋಗಿ ಅಂತರ್ ಇಂದ್ರಿಯ ಜ್ಞಾನವೊಂದೇ ಉಳಿಯುತ್ತದೆ. ಈ ಅಂತರ್ ಇಂದ್ರಿಯ ಜ್ಞಾನವೂ ಸಂವಿತ್ತಿನಲ್ಲಿ ಸೇರಿಹೋದರೆ ಚಿತ್ತವೂ ನಷ್ಟವಾಗಿ ಎಲ್ಲವನ್ನೂ ತನ್ನಲ್ಲಿ ಲಯಮಾಡಿಕೊಳ್ಳುವ ಪರಾಸಂವಿತ್ತೊಂದೇ ಉಳಿಯುತ್ತದೆ.

೪೪ ಅವಾಚ್ಯಾನಿ ಸಹಸ್ರಾಣಿ ಕಥಯಂತು ನ ಮನ್ಮನಃ
ಮಾಲಿನ್ಯಮೇತ್ಯುದಾಸೀನಂ ರಜೋಭಿರ್ಮುಕುರೋ ಯಥಾ ॥ ೧೮ ॥

ಜನಗಳು ಸಾವಿರಾರು ಬಗೆ ಬಯ್ಯಲಿ. ಉದಾಸೀನದಿಂದಿರುವ ನನ್ನ ಮನಸ್ಸು ಮಲಿನವಾಗುವುದಿಲ್ಲ. ಕನ್ನಡಿಯು ಯಾವ ರೀತಿ ಧೂಳಿನಿಂದ ಮಲಿನವಾಗುವುದಿಲ್ಲವೋ ಹಾಗೆ ಈ ಜನಾಪವಾದದಿಂದ ನನ್ನ ಮನಸ್ಸು ಉದ್ವೇಗಪಡುವುದಿಲ್ಲ.- ಮಲಿನವಾಗುವುದಿಲ್ಲ.

ಇಲ್ಲಿ ಉದಾಸೀನ ಅಂದರೆ ಪರಶಿವಾನುಸಂಧಾನದಲ್ಲಿಯೇ ಇದ್ದು ಭೂಷಣೆ ದೂಷಣೆಗಳಲ್ಲಿ ಉದಾಸೀನವಾಗಿರುವುದೆಂದರ್ಥ.

೪೫ ನಿಂದಂತು ವಾ ಮಾಮಥ ವಾ ಸ್ತುವಂತು |
ಕುರ್ವಂತು ವಾರ್ಚಾಂ ವಿವಿಧೈಃ ಸುಪುಷ್ಪೈಃ |
ನ ಹರ್ಷಮಾಯಾಮ್ಯಥವಾ ವಿಷಾದಂ
ವಿಶುದ್ಧ ಬೋಧಾಮೃತಪಾನಸ್ವಸ್ಥಾ ॥ ೨೧ ॥

ನನ್ನನ್ನು ತೆಗಳಲಿ, ಹೊಗಳಲಿ, ಒಳ್ಳೆ ಹೂಗಳಿಂದ ನನ್ನನ್ನು ಪೂಜೆಮಾಡಲಿ ಬಿಡಲಿ, ಏನುಮಾಡಿದರೂ ನಿರ್ಮಲವಾದ ಜ್ಞಾನಾಮೃತ ಪಾನಮಾಡಿ ಶಾಂತಳಾಗಿರುವ ನಾನು ಸಂತೋಷಪಡುವುದೂ ಇಲ್ಲ, ದುಃಖಪಡುವುದೂ ಇಲ್ಲ.

೪೬ ನಾಶಂ ಗತೇsರ್ಕೇ ಖಲು ಮಾನಸಂಜ್ಞೇ
ಮೇಯಕ್ಷಯಾಖ್ಯಾ ರಜನೀ ವಿಭಾತಿ |
ಜೀವಾಖ್ಯಚಂದ್ರಃ ಶಿವಧಾಮ್ನಿ ಲೀನಃ
ಸ್ವಾಹಂತ್ವರಾಹುಂ ಗ್ರಸತೇಚ ಸದ್ಯಃ ॥ ೨೨ ॥

ಅಭಿಮಾನವೆಂಬ ಸೂರ್ಯನು ಮುಳುಗಿ ಪ್ರಮಾಣಗಳಿಂದ ತಿಳಿಯುವ ಭೇದ ಪ್ರಪಂಚವು ನಿವೃತ್ತಿಯಾಗಲಾಗಿ ಆ ಮಹಾಕತ್ತಲೆಯು ಬೆಳಗುತ್ತದೆ. ಈ ಕತ್ತಲೆಯಲ್ಲಿ ಜೀವನೆಂಬ ಚಂದ್ರನು ಶಿವಸ್ವರೂಪದಲ್ಲಿ ಲೀನನಾಗಿ ಸ್ವಾತ್ಮಾಹಂಕಾರವೆಂಬ ರಾಹುವನ್ನು ನುಂಗುತ್ತಾನೆ.

ಇಲ್ಲಿ ವಿರೋಧಾಲಂಕಾರದಿಂದ ಅಲ್ಪಾಹಂತಾಲಯ ವರ್ಣನೆಯಿದೆ. ಪ್ರಮಾಣಗಳಿಂದ ಉಂಟಾಗುವ ತಿಳಿವಳಿಕೆಯು ಭೇದರೂಪವಾಗಿದೆ. ಇದನ್ನು ಮಾರುವಿಕೆಯೇ ಮಾನಸಸೂರ್ಯಾಸ್ತಮಯ. ಅಭೇದ ವ್ಯಾಪ್ತಿಯೇ ಮೇಯಕ್ಷಯವೆಂಬ ಕತ್ತಲೆ. ಜೀವನು ತಾನು ಶಿವನೆಂದು ತಿಳಿಯುವಿಕೆಯೇ ಜೀವನೆಂಬ ಚಂದ್ರನು ಶಿವರೂಪದಲ್ಲಿ ಲೀನನಾಗುವಿಕೆ. ಅಖಂಡೈಕ ರಸಾನುಭವವೇ ಜೀವನೆಂಬ ಚಂದ್ರನು ಸ್ವಾತ್ಮಾಹಂಕಾರ ರಾಹುವನ್ನು ನುಂಗುವಿಕೆ.

ಮೇಯ—ಪ್ರಮಾಣಗಳಿಂದ ತಿಳಿಯಲ್ಪಡುವ ಪದಾರ್ಥಗಳು ಮತ್ತು ಅವುಗಳ ಜ್ಞಾನಗಳು.

೪೭ ಚಿತ್ತಾದರ್ಶೇ ನಿರ್ಮಲತ್ವಂ ಪ್ರಯಾತೇ
ಪ್ರೋದ್ಭೂತಾ ಮೇ ಸ್ವಜನೇ ಪ್ರತ್ಯಭಿಜ್ಞಾ |
ದೃಷ್ಟೋದೇವಃ ಸ್ವಸ್ವರೂಪೋ ಮಯಾಸೌ
ನಾಹಂ ನ ತ್ವಂ ನೈವಚಾಯಂ ಪ್ರಪಂಚಃ || ೩೦ ||

ಮನಸ್ಸೆಂಬ ಕನ್ನಡಿಯು ಸ್ವಚ್ಛವಾಗಲಾಗಿ ನನಗೆ ಆತ್ಮೀಯರಲ್ಲಿ ಮೂಲಭೂತವಾದ ಹಿಂದಿನ ಜ್ಞಾನವುಂಟಾಯಿತು. ಸ್ವಜನ ಪರಜನ ಇವುಗಳೆಲ್ಲಾ ಒಂದೇ ಎಂಬ ಭಾವನೆಯುಂಟಾಯಿತು. ಇದರಿಂದ ಆ ಪರಮಾತ್ಮನು ನನ್ನಿಂದ ಬೇರೆಯಲ್ಲವೆಂದು ತಿಳಿದೆನು. ಇಂತಹ ಅಭೇದ ಭಾವನೆಯಿಂದ ನಾನೂ ನೀನೂ ಎಂಬ ಭೇದಬುದ್ಧಿಯು ಮಾಯ ವಾದದ್ದಲ್ಲದೆ ಈ ಹೊರಗಿನ ಪ್ರಪಂಚವು ಪರಮಾತ್ಮನಿಂದ ಭಿನ್ನವಲ್ಲವೆಂದು ತಿಳಿದೆನು.

೪೮ ಕಶ್ಚಿತ್ ಪ್ರಸುಪ್ತೋಽಪಿ ವಿಬುದ್ಧ ಏವ
ಕಶ್ಚಿತ್ ಪ್ರಬುದ್ಧೋಽಪಿಚ ಸುಪ್ತತುಲ್ಯಃ |
ಸ್ನಾತೋಽಪಿ ಕಶ್ಚಿದಶುಚಿರ್ಮತೋ ಮೇ
ಭುಕ್ತ್ವಾಸ್ತ್ರಿಯಂ ಚಾಪ್ಯಪರಃ ಸುಪೂತಃ || ೩೧ ||

ಈ ಬಗೆಯಾದ ಅಭೇದ ಭಾವನೆಯಿಂದಿರುವವನು ನಿದ್ದೆ ಮಾಡು ತ್ತಿದ್ದರೂ ಎಚ್ಚರವಾಗಿರುವವನೇ ಆಗಿರುತ್ತಾನೆ. ಎಚ್ಚರವಾಗಿದ್ದರೂ ನಿದ್ದೆಮಾಡುತ್ತಿರುವವನಿಗೆ ಸಮಾನನಾಗಿರುವವನೇ ಆಗಿರುತ್ತಾನೆ. ಕೆಲವರು ಗಂಗಾ ಮೊದಲಾದ ನದಿಗಳಲ್ಲಿ ಸ್ನಾನಮಾಡಿದರೂ ಮೈಲಿಗೆ ಯಾಗಿರುವವರೇ ಆಗಿರುತ್ತಾರೆ. ಇತರರು ಪ್ರಾಪಂಚಿಕವಾದ ಸ್ತ್ರೀ ಸಂಬಂಧವೇ ಮೊದಲಾದ ನಡೆವಳಿಕೆಗಳಿದ್ದರೂ ಪವಿತ್ರವಾದವರೆಂದೇ ನನ್ನ ಅಭಿಪ್ರಾಯ.

ಇಲ್ಲಿ ನಿದ್ದೆ ಎಂದರೆ ಮಾಯೆಯೆಂಬ ನಿದ್ದೆ.

ಅಶುಚಿ=ಆತ್ಮಕ್ಕೆ ಅಂಟಿಕೊಂಡಿರುವ ಮಲ ಅಥವಾ ದೋಷ.

೪೯ ಆಬ್ರಹ್ಮಾಂಡಂ ನಾಭಿತೋ ಯೇನ ನಿತ್ಯ
ಮೋಂಕಾರಾಖ್ಯೋ ಮಂತ್ರ ಏಕೋಧೃತೋಽಯಂ |
ಕೃತ್ವಾಚಿತ್ತಂ ತದ್ವಿಮರ್ಶೈಕಸಾರಂ
ಕಿಂ ತಸ್ಯಾನ್ಯೈರ್ಮಂತ್ರವೃಂದೈರ್ವಿಧೇಯಂ || ೩೩ ||

ನಾಭಿಯಿಂದ ಮೊದಲುಮಾಡಿಕೊಂಡು ಬ್ರಹ್ಮಾಂಡವನ್ನೆಲ್ಲಾ ಆಕ್ರಮಿಸಿರುವ ಓಂಕಾರವೆಂಬ ಮಂತ್ರವು ಯಾವಾಗ ಅನುಸಂಧಾನ ಮಾಡಲ್ಪಡುತ್ತದೆಯೋ ಯಾವನ ಮನಸ್ಸು ಈ ಪ್ರಣವದ ವಿಮರ್ಶೆಯೇ ಪ್ರಧಾನವಾದ ಗುರಿಯುಳ್ಳದ್ದಾಗಿರುತ್ತದೆಯೋ ಅವನಿಗೆ ಬೇರೆ ಮಂತ್ರಗಳಿಂದೇನಾಗಬೇಕು ?

ಇಲ್ಲಿ ನಾಭಿ ಎಂಬುದನ್ನು ದೇಹದಲ್ಲಿ ನಾಭಿಪ್ರದೇಶದ ಕೆಳಗೆ ಆಸನ ಪ್ರದೇಶದ ಮೇಲ್ಭಾಗದಲ್ಲಿರುವ 'ಕಂದ'ವೆಂಬ ಸೂಕ್ಷ್ಮಗ್ರಂಥಿ ಯೆಂಬರ್ಥದಲ್ಲಿ ಉಪಯೋಗಿಸಿದೆ. ಇಲ್ಲಿಂದಲೇ ನಮ್ಮ ಮನಸ್ಸಿನ ವೃತ್ತಿಗಳೂ ವಾಸನೆಗಳೂ ಉದ್ಭವವಾಗಿ ಹೊರಡುವುದು. ಪ್ರಾಣ ಶಕ್ತಿಯು ಇಲ್ಲಿಂದ ಹೊರಟು ಚಕ್ರಗಳ ಮೂಲಕ ಹರಿದು ಹೃದಯದ ಮೂಲಕ ಮೇಲಕ್ಕೆ ಹೋಗುತ್ತದೆ. ಸಾಧಕನು ಧ್ಯಾನಮಾಡುವಾಗ್ಗೆ ಉಚ್ಛ್ವಾಸದ ವಾಯುವನ್ನು ಪೂರಕವಾಗಿ ಬಂಧಿಸಿ ಶಿವನಲ್ಲಿ ತನ್ನ ಮನಸ್ಸು ಐಕ್ಯವಾಗುವಂತೆ ಮಾಡಿ ತಲೆಯಲ್ಲಿರುವ ಸಾಂಕೇತಿಕ ಚಂದ್ರನಿಂದ ಅಮೃತವನ್ನು ಸುರಿಸುವ ಹಾಗೆ ಮಾಡುವುದೆಂದು ಯೋಗ ಸಂಪ್ರದಾಯದವರು ಹೇಳುವುದನ್ನೇ ಪ್ರಣವ ವಿಮರ್ಶೆಯೆಂದೆನ್ನುವುದು.

೫೦ ಆಸಾದ್ಯ ಸಂಸಾರಮಹಂ ವರಾಕೀ
ಪ್ರಾಪ್ತಾವಿಶುದ್ಧಂ ಸಹಜಂ ಪ್ರಬೋಧಂ |
ಮ್ರಿಯೇನಕಸ್ಯಾಪಿ ನಕೋಽಪಿ ಮೇವಾ
ಮೃತಾ ಮೃತೇ ಮಾಂ ಪ್ರತಿತುಲ್ಯರೂಪೇ || ೩೪ ||

ಬಡಪಾಯಿಯಾದ ನಾನು ಈ ಸಂಸಾರವನ್ನು ಹೊಂದಿದ್ದರೂ ಸಹಜವಾದ ಜ್ಞಾನವಿಕಾಸವನ್ನು ಹೊಂದಿದ್ದೇನೆ. ಈ ವಿಕಾಸದಿಂದ ನಾನು ಯಾರ ಅನುಬಂಧದ ದೃಷ್ಟಿಯಿಂದಲೂ ಸಾಯುವವಳಲ್ಲ. ನನ್ನ

ಅನುಬಂಧದ ದೃಷ್ಟಿಯಿಂದ ಯಾರೂ ಸಾಯಬೇಕಾಗಿಲ್ಲ. ಮರಣ, ಮರಣವಿಲ್ಲದಿರುವಿಕೆ ಇವೆರಡೂ ನನಗೆ ಸಮಾನ.

ಅಖಂಡವಾದ ಚಿತ್ತಿನ ವ್ಯವಹಾರದಲ್ಲಿ ಕೆಲವು ಉಬ್ಬರವಿಳಿತಗಳಾಗುತ್ತವೆ. ಅವುಗಳಲ್ಲಿ ಜನನ ಮರಣಗಳೂ ಸೇರಿವೆ. ಅವುಗಳನ್ನು ಸಾಮಾನ್ಯ ಜನರು ವಿಪರೀತವಾಗಿ ಭಾವಿಸುತ್ತಾರೆ. ಜನನ ಮರಣಗಳು ಕೇವಲ ಕ್ರಿಯಾಶಕ್ತಿಯ ವಿಲಾಸ ಮಾತ್ರ. ಈ ತಾತ್ವಿಕದೃಷ್ಟಿಯಿಂದ ನೋಡಿದರೆ ಲಲ್ಲಯೋಗೀಶ್ವರಿಗೆ ಬದುಕಿರುವುದೂ ಸಾಯುವುದೂ ಎರಡೂ ಸಮಾನವೆಂದು ಗೊತ್ತಾಗುತ್ತದೆ.

ಈ ಸಂದರ್ಭದಲ್ಲಿ ಉತ್ಪಲದೇವನ ಶಿವಸ್ತೋತ್ರಾವಳಿಯ ಶ್ಲೋಕವನ್ನು ಉದಾಹರಿಸಬಹುದು.

ತಾವಕೇ ವಪುಷಿ ವಿಶ್ವನಿರ್ಭರೇ
ಚಿತ್ಸುಧಾರಸಮಯೇ ನಿರತ್ಯಯೇ
ತಿಷ್ಠತಃ ಸತತಂ ಅರ್ಚತಃ ಪ್ರಭುಂ
ಜೀವಿತಂ ಮೃತಂ ಅಥಾನ್ಯದ್ ಅಸ್ತು ಮೇ ॥

ಅನಂತವಾದ ಚಿದೈಕರಸವಾದ ನಿನ್ನ ಶರೀರದಲ್ಲಿದ್ದು ನಿನ್ನನ್ನು ಪೂಜೆಮಾಡುತ್ತಿರುವ ನನಗೆ ಮರಣವಾಗಲಿ ಜನನವಾಗಲಿ ಅಥವಾ ಬೇರೆ ಅವಸ್ಥೆಗಳಾಗಲಿ ಇರಲಿ, ಏನೂ ವ್ಯತ್ಯಾಸವಿಲ್ಲ, ಏನೂ ವಿಶೇಷವಿಲ್ಲ.

೫೧ ಆಕಾಶೋಭೂರ್ವಾಯುರಾಪೋಽನಿಲಶ್ಚ
ರಾತ್ರಿಶ್ಚಾಹಶ್ಚೇತಿ ಸರ್ವಂ ತ್ವಮೇವ |
ತತ್ಕಾರ್ಯತ್ವಾತ್ಪುಷ್ಪಮರ್ಘಾದಿ ಚ ತ್ವಂ
ತ್ವತ್ಪೂಜಾರ್ಥಂ ನೈವ ಕಿಂಚಿಲ್ಲಭೇಽಹಮ್ ॥ ೪೩ ॥

ಆಕಾಶ ಭೂಮಿ ಗಾಳಿ ನೀರು ಬೆಂಕಿ ರಾತ್ರಿ ಹಗಲು ಎಲ್ಲವೂ ನೀನೆ ಆಗಿದ್ದೀಯೆ. ಹೂವು ನೀರೂ ಮೊದಲಾದ ಪೂಜಾದ್ರವ್ಯಗಳೂ ಈ ಭೂತಗಳ ಪರಿಣಾಮರೂಪಗಳಾಗಿವೆ. ಆದುದರಿಂದ ನಿನ್ನನ್ನು ಪೂಜಿಸಲು ನನಗೆ ಬೇರೆ ಯಾವ ಪದಾರ್ಥವೂ ದೊರಕುವುದಿಲ್ಲ. ಯಾವುದರಿಂದ ನಿನ್ನನ್ನು ಪೂಜಿಸಲಿ.

ಪೂಜ್ಯ ಪೂಜಕ ಪೂಜೋಪಕರಣ ಇವು ಮೂರು ಒಂದಾಗ ಬೇಕೆನ್ನುವುದು ಕಾಶ್ಮೀರಶೈವದ ಸಿದ್ಧಾಂತ. ಎಲ್ಲವೂ ಶಿವಮಯವೆಂಬ ಅಭೇದ ಭಾವನೆಯಿಂದ ಇದರ ಅನುಭವವೇರ್ಪಡುತ್ತದೆ.

೫೨ ತತೋಽತ್ರದೃಷ್ಟ್ವಾವರಣಾನಿಭೂಯೋ
ಜ್ಞಾತಂ ಮಯಾತ್ರೈವ ಭವಿಷ್ಯತೀತಿ ।
ಭಂಕ್ತ್ವಾಯದಾ ತಾನಿಚ ಸಂಪ್ರವಿಷ್ಟಾ
ಲಲ್ಲೇತಿ ಲೋಕೇ ಪ್ರತಿಥಾ ತದಾಹಂ ॥೫೯॥

ಆಮೇಲೆ–ಸ್ವರೂಪಾನುಸಂಧಾನದಿಂದ ಆತ್ಮಸಾಕ್ಷಾತ್ಕಾರವನ್ನು ಪಡೆದ ಮೇಲೆ–ಈ ಶರೀರದಲ್ಲಿ ಮರಳಿ ಅನ್ನಮಯಾದಿ ಆವರಣಗಳನ್ನು ದಾಟ ಈ ಜೀವಾತ್ಮನು ಈ ಶರೀರದಲ್ಲಿಯೇ ಇರುವನೆಂದು ತಿಳಿದು ಆತ್ಮ ಸ್ವರೂಪವನ್ನು ಸಾಕ್ಷಾತ್ಕರಿಸಿದ ಮೇಲೆ ಈ ಪ್ರಪಂಚದಲ್ಲಿ 'ಲಲ್ಲಾ' ಎಂಬ ಹೆಸರಿನಿಂದ ಪ್ರಸಿದ್ಧಳಾದೆನು.

ಭಂಕ್ತ್ವಾ ದಾಟ

೫೩ ನಾಹಂ ನ ಚ ತ್ವಂ ನ ಚ ಕಾಪಿ ಚರ್ಚಾ
ಧ್ಯಾನಸ್ಯ ಯೋಗ್ಯಾತ್ರಪದೇಽತಿಶಾಂತೇ ।
ಕೋಽಪ್ಯನ್ವಯಶ್ಚಾತ್ರನ ಭಾತಿ ತಸ್ಮಾತ್
ವಿಸ್ಮಾರ್ಯಲೀನಂ ಸ್ವಮಿವಾತ್ರಸದ್ಭಿಃ ॥೫೯॥

ಪ್ರಶಾಂತವಾದ ಧ್ಯಾನದ ಅವಸ್ಥೆಯಲ್ಲಿ ನಾನು ನೀನು ಎಂಬ ಭೇದವಿಲ್ಲ. ಯಾವ ಬಗೆಯಾದ ಚರ್ಚೆಯೂ ಇಲ್ಲಿ ಉಪಯೋಗವಿಲ್ಲ. ಯಾವ ವಂಶದ ಹಿರಿಮೆಯೂ ಇಲ್ಲಿ ತೋರುವುದಿಲ್ಲ. ಆದುದರಿಂದ ಸ್ವಸ್ವರೂಪವು ಅಖಂಡವಾದ ಬ್ರಹ್ಮನಲ್ಲಿ ಲೀನವಾದಹಾಗೆ–ತನ್ನನ್ನು ತಾನು ಮರೆತಹಾಗೆ–ಇರುತ್ತದೆ.

ಪ್ರಶಾಂತವಾದ ಧ್ಯಾನದಲ್ಲಿ ನಾನು ನೀನು ಎಂಬುವುದಿರುವುದಿಲ್ಲ. ಧ್ಯಾನಮಾಡತಕ್ಕ ಧ್ಯೇಯವಸ್ತುವೂ ಇರುವುದಿಲ್ಲ. ತನ್ನನ್ನು ತಾನು ಮರೆತಂತಿರುವುದು. ಎಲ್ಲವೂ ಶಿವಸ್ವರೂಪವೆನ್ನುವುದೊಂದೇ ಇರುವುದು.

ಸತ್ಪುರುಷರು ಒಂದು ಸಾರಿ ಚಿತ್ಸ್ವರೂಪವನ್ನು ಕಂಡರೆ ಅಲ್ಲಿಯೇ ಲೀನವಾಗಿರುತ್ತಾರೆ.

## ಸಿದ್ಧಾವಸ್ಥೆ

### (ಐದನೆಯ ಹಂತ)

೫೪ ತತಃ ಪ್ರಣಾದಿ ರೋಧೇನ ಪ್ರಜ್ವಾಲ್ಯ ಜ್ಞಾನದೀಪಿಕಾವ್ |
ಸ್ಫುಟಂ ದೃಷ್ಟೋ ಮಯಾ ತತ್ರ ಚಿತ್ಸ್ವರೂಪೋ ನಿರಾಮಯಃ ||೪||

ಪ್ರಾಣವಾಯುಗಳ ಗತಿಯನ್ನು ತಡೆಯುವುದರ ಮೂಲಕ ಜ್ಞಾನ ದೀಪವನ್ನು ಬೆಳಗಿಸಿ ನನ್ನ ದೇಹದಲ್ಲಿಯೇ ಚಿದ್ರೂಪಿಯಾದ ವಿಕಾರವಿಲ್ಲದ ಆ ಶಿವನನ್ನು ಸ್ವಚ್ಛವಾಗಿ ನೋಡಿದೆನು.

ಜೀವನಕ್ಕೆ ಮುಖಾಧಾರವಾದದ್ದು ಪ್ರಾಣಶಕ್ತಿ. ಇದು ಹಸಿವು ಬಾಯಾರಿಕೆ ಮೊದಲಾದ ಶಾರೀರಕ ಆಕಾಂಕ್ಷೆಗಳನ್ನೂ ಸಂತೋಷ ಉದ್ವೇಗ ಮೊದಲಾದ ಮಾನಸಿಕ ವಿಕಾರಗಳನ್ನೂ ಉಂಟುಮಾಡುವುದಕ್ಕೆ ಕಾರಣವಾಗಿದೆ. ನಿರ್ದಿಷ್ಟವಾದ ಕ್ರಮದಲ್ಲಿ ಪ್ರಾಣವಾಯುವಿನ ಗತಿಯನ್ನು ತಡೆದರೆ ಮನಸ್ಸಿನ ಚಂಚಲತೆಯು ನಿಲ್ಲುತ್ತದೆ. "ಚಲೇ ವಾತೇ ಚಲಂ ಚಿತ್ತಂ ನಿಶ್ಚಲೇ ನಿಶ್ಚಲಂ ಭವೇತ್" ಎನ್ನುವ ಹಾಗೆ ಪ್ರಾಣಾದಿರೋಧದಿಂದ ಮಧ್ಯನಾಡಿ ವಿಕಾಸವೇರ್ಪಟ್ಟು ಸ್ವಸ್ವರೂಪಾವಿರ್ಭಾವವಾಗಿ ಜ್ಞಾನದೀಪವು ಬೆಳಗುತ್ತದೆ.

ಜ್ಞಾನದೀಪದ ಪ್ರಕಾಶ, ಸ್ವರೂಪಸಾಕ್ಷಾತ್ಕಾರ, ಆತ್ಮಸಾಕ್ಷಾತ್ಕಾರ ಇವುಗಳಿಗೆ ಒಂದೇ ಅರ್ಥ.

೫೫ ತಂತ್ರಂಸರ್ವಂ ಲೀಯತೇ ಮಂತ್ರ ಏವ
ಮಂತ್ರಶ್ಚಿತ್ತೇ ಲೀಯತೇ ನಾದಮೂಲಃ |
ಚಿತ್ತೇಲೀನೇ ಲೀಯತೇ ಸರ್ವಮೇವ
ದೃಶ್ಯಂ ದ್ರಷ್ಟಾ ಶಿಷ್ಯತೇ ಚಿತ್ಸರೂಪಃ ||೧೧||

ಪೂಜೆಯಲ್ಲಿ ಮಾಡುವ ಕೈಕರಣಗಳೆಲ್ಲಾ ಮಂತ್ರದಲ್ಲಿ ಲಯಗೊಳ್ಳುತ್ತವೆ. ನಾದ (ಶಬ್ದ) ಮೂಲವಾದ ಮಂತ್ರವು ಮನಸ್ಸಿನಲ್ಲಿ ಲಯಗೊಳ್ಳುತ್ತದೆ. ಮನಸ್ಸು ಲಯವಾದರೆ ಎಲ್ಲವೂ ಕರಗಿಹೋಗುತ್ತದೆ. ಗ್ರಾಹ್ಯವಾಗಿರುವ ದೃಶ್ಯಪ್ರಪಂಚವೂ ಗ್ರಾಹಕನಾಗಿರುವ ಆತ್ಮನೂ ಚಿತ್ಸ್ವರೂಪವಾಗಿ ಉಳಿಯುತ್ತಾರೆ.

೫೬ ಕಾಮಾದಿಕಂ ಕಾನನಷಟ್ಕಮೇತ
ಚ್ಛಿತ್ವಾಮೃತಂ ಬೋಧಮಯಂ ಮಯಾಪ್ತಮ್ |
ಪ್ರಾಣಾದಿರೋಧಾತ್ ಪ್ರಕೃತಿಂಚ ಭಕ್ತ್ಯಾ
ಮನಶ್ಚ ದಗ್ಧ್ವಾ ಶಿವಧಾಮಲಬ್ಧಮ್ ॥೨೫॥

ಕಾಮವೇ ಮೊದಲಾದ ಆರು ಕಾಡುಗಳನ್ನು (ಅರಿಷಡ್ವರ್ಗಗಳನ್ನು) ಕತ್ತರಿಸಿ ಜ್ಞಾನಮಯವಾದ ಅಮೃತವನ್ನು ಹೊಂದಿದ್ದೇನೆ. ಪ್ರಾಣವಾಯುವಿನ ಸಂಚಾರವನ್ನು ನಿಲ್ಲಿಸುವುದರಿಂದ ಸ್ವಭಾವವನ್ನು ಗೆದ್ದು ಭಕ್ತಿಯ ಬಲದಿಂದ ಮನಸ್ಸನ್ನು ಸುಟ್ಟು ಶಿವನ ಸಾಕ್ಷಾತ್ಕಾರವನ್ನು ಪಡೆದಿದ್ದೇನೆ.

ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ಆರು ತೊಂದರೆಗಳನ್ನು ಆಚಾರ ಮತ್ತು ತತ್ವಾಭ್ಯಾಸದಿಂದ ಜಯಿಸಿದರೆ ಯೋಗದ ಎಂಟು ಅಂಗಗಳಲ್ಲಿ ಯಮ, ನಿಯಮ, ಆಸನಗಳೆಂಬ ಮೂರು ಸಾಧನಗಳ ಸಿದ್ಧಿಯಾಯಿತು. ಪ್ರಾಣಾಯಾಮ ಮತ್ತು ಪ್ರತ್ಯಾಹಾರ ಇವೆರಡು ಅಂಗಗಳ ಮೂಲಕ ಪ್ರಾಣವಾಯುವಿನ ಗತಿಯನ್ನು ತಡೆಯಲು ಸಮರ್ಥನಾಗುತ್ತಾನೆ. ಅನಂತರ ಧಾರಣ ಮತ್ತು ಧ್ಯಾನ ಇವೆರಡು ಅಂಗಗಳ ಸಿದ್ಧಿಯೂ ಭಕ್ತಿಯ ರೂಪದಿಂದ ಸಿದ್ಧಿಸಿದರೆ ಮನೋವೃತ್ತಿಗಳು ದೂರವಾಗುವುವು. ಇಷ್ಟು ಸಿದ್ಧತೆ ಸಕ್ರಮವಾಗಿ ವಿಶದವಾಗಿ ಏರ್ಪಟ್ಟಲ್ಲಿ ಇವುಗಳ ಎಲ್ಲಾ ಸಿದ್ಧಿಗಳ ಫಲವಾದ ಸಮಾಧಿ ಲಾಭವೇರ್ಪಡುವುದು. ಇದೇ ಬೋಧಮಯನಾದ ಚಿದ್ರೂಪಿಯಾದ ಶಿವನ ಸಾಕ್ಷಾತ್ಕಾರ.

೫೭ ಕಾಮೋ ಲೋಭೋಽಹಂಕೃತಿಶ್ಚ್ಯೈವ ಯೇನ
ಯತ್ನಾತ್ಪೂರ್ವಂ ಮಾರಿತಾ ಮಾರ್ಗಚೌರಾಃ |
ತೇನೈವೈಕೆನೈಶ್ವರಂ ಧಾಮ ಲಬ್ಧ್ವಾ
ಸರ್ವಂ ತ್ಯಕ್ತ್ವಾ ಭಸ್ಮವದ್ಭಾವಜಾತಂ ॥೪೩॥

ಕಾಮ ಲೋಭ ಅಹಂಕಾರ ಮೊದಲಾದ ದಾರಿಗಳ್ಳರನ್ನು ಹಿಂದೆಯೇ ಬಹಳ ಪ್ರಯತ್ನಪಟ್ಟು ಕೊಂದುಹಾಕಿದ್ದಾಯಿತು. ಅದೇ ಪ್ರಯತ್ನದಿಂದಲೇ ಎಲ್ಲಾ ಪದಾರ್ಥಗಳ ಸ್ವರೂಪವನ್ನು ಬೂದಿ

ಯಂತೆಣಿಸಿ ಅಭಿಮಾನವನ್ನು ಬಿಟ್ಟಿದ್ದಾಯಿತು. ಇದರ ಪ್ರಭಾವದಿಂದಲೇ ಈಶ್ವರನ ಸ್ವರೂಪವನ್ನು ಸಾಕ್ಷಾತ್ಕರಿಸಿದ್ದಾಯಿತು.

೫೮ ದೇಹಾದಿಷಟ್ಕೋಶಪಿಧಾನ ತಸ್ತ್ವಂ
ಅಪ್ರಾಪ್ಯ ಖಿನ್ನಾಸ್ಮಿ ಚಿರಂ ಮಹೇಶ।
ಉಪಾಧಿ ನಿರ್ಮುಕ್ತ ವಿಬೋಧರೂಪಂ
ಜ್ಞಾತ್ವಾದ್ಯ ವಿಶ್ರಾಂತಿ ಮುಪಾಗತಾ ತ್ವಾಂ ॥೫೮॥

ಶರೀರವೇ ಮೊದಲಾದ ಆರು ಕೋಶಗಳ ಆವರಣದಿಂದ ನಿನ್ನನ್ನು ಹೊಂದದೆ ದುಃಖಪಡುತ್ತಲಿದ್ದೇನೆ. ಎಲೈ ಮಹೇಶ್ವರನೇ, ನಿನ್ನನ್ನು ಕಾಣಲು ಇದ್ದ ಎಲ್ಲಾ ತೊಂದರೆಗಳನ್ನೂ ಕಳೆದು ಚಿದ್ರೂಪಿಯಾದ ನಿನ್ನನ್ನು ಸಾಕ್ಷಾತ್ಕರಿಸಿ ಶಾಂತಿಯನ್ನು ಪಡೆದನು.

ಷಟ್ಕೋಶಗಳು—ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ; ಆನಂದಮಯ ಕೋಶದಲ್ಲಿ ಜೀವಾತ್ಮ ಪರಮಾತ್ಮ ಎಂಬ ಎರಡು ದೃಷ್ಟಿಗಳಿಂದ ನೋಡಿದರೆ ಆರು ಕೋಶಗಳಾಗುತ್ತವೆ. ಹೀಗೆ ಆರು ಕೋಶಗಳಿಂದಲೇ ಎಲ್ಲಾ ತೊಂದರೆಗಳು. ಕಾಶ್ಮೀರ ಶಿವಾದ್ವೈತ ಸಿದ್ಧಾಂತದ ಪ್ರಕಾರವಾಗಿ ಜೀವಾತ್ಮನ ಸಂಕೋಚ ಸ್ಥಿತಿಯು ಪಂಚಕಂಚುಕಗಳಿಂದ ಕೂಡಿದೆಯೆಂದೂ ಕೆಲವೆಡೆಗಳಲ್ಲಿ ಷಟ್ಕಂಚುಕಗಳಿಂದ ಕೂಡಿದೆಯೆಂದೂ ವಿವರಣೆಯಿರುತ್ತದೆ. ಸೂಕ್ಷ್ಮ ವಿವೇಚನೆಯಿಂದ ಸಂಜ್ಞೆ ವ್ಯತ್ಯಾಸವಾದರೂ ತಾತ್ಪರ್ಯದಲ್ಲಿ ಭಿನ್ನಾಭಿಪ್ರಾಯಗಳಿಲ್ಲ.

೫೯ ಸ್ವಾತ್ಮಾನ್ವೇಷಣ ಯತ್ನಮಾತ್ರ ನಿರತಾ ಶ್ರಾಂತಾ ತತೋಽಹಂಸ್ಥಿತಾ
ತಜ್ಞಾನೈಕ ಮಹಾಪದೇಽತಿ ವಿಜನೇ ಪ್ರಾಣಾದಿ ರೋಧಾತ್ತತಃ।
ಲಬ್ಧ್ವಾಽನಂದ ಸುರಾಗೃಹಂ ಚ ತದನು ದೃಷ್ಟ್ವಾಽತ್ರಭಾಂಡಾನ್ಯಲಂ
ಪೂರ್ಣಾನ್ಯೇವ ಕಥಾಪಿ ತತ್ರವಿಮುಖಃ ಪಾಪ್ಮೋಽಜನಃ ಶೋಚಿತಃ ॥೬೦॥

ಸ್ವಸ್ವರೂಪವನ್ನು ಸಾಕ್ಷಾತ್ಕರಿಸುವುದರಲ್ಲಿಯೇ ತೊಡಗಿದೆನು. ಅದರಿಂದ ಬಳಲಿದವಳಾಗಿದ್ದೇನೆ. ಆದುದರಿಂದ ಪರಮಾತ್ಮ ಜ್ಞಾನವೆಂಬ ಏಕಾಂತವಾದ ಸ್ಥಿತಿಯಲ್ಲಿ ಪ್ರಾಣಾಪಾನಗಳನ್ನು ನಿಲ್ಲಿಸುವುದರ

ಪ್ರಯತ್ನದಲ್ಲಿ ಮತ್ತೂ ಬಳಲಿದ್ದೇನೆ. ಈ ಆಯಾಸವನ್ನು ಪರಿಹಾರ ಮಾಡಿಕೊಳ್ಳುವುದಕ್ಕೋಸ್ಕರ ಸಹಜಾನಂದವೆಂಬ ಹೆಂಡದ ಮನೆಯೊಳಕ್ಕೆ ಹೊಕ್ಕು ಅಲ್ಲಿ ಎಲ್ಲಾ ಮಡಿಕೆಗಳೂ ತುಂಬಿರುವುದನ್ನು ಕಂಡೆನು. ಆದರೂ ಅದನ್ನು ಕುಡಿಯಲಿಲ್ಲ. ಇಂತಹ ಜೀವಾತ್ಮನ ವಿಷಯ ಕುರಿತು ವಿಷಾದಪಡಬೇಕಾಗಿದೆ.

ಮಯಾಸ್ ಹ್ಯುಃ ನಃ ಪ್ರಕಾಶ್ ಕುನೆ
ಪಯಾಸ್ ಹ್ಯುಃ ನಃ ತೀರ್ಥಕೋಽನ್ |
ದಯಾಸ್ ಹ್ಯುಃ ನಃ ಬಾಂಧವ್ ಕುನೆ
ಬಯಾಸ್ ಹ್ಯುಃ ನಃ ಸುಖಕೋಽನ್ ||

(ಕಾಶ್ಮೀರಿ ಭಾಷೆಯಲ್ಲಿರುವ ಲಲ್ಲವಾಕ್ಯ)

ಬ್ರಹ್ಮಜ್ಞಾನಕ್ಕಿಂತ ಹೆಚ್ಚಿನ ಪ್ರಕಾಶವಿಲ್ಲ.
ಪರಮಾತ್ಮನ ಸಾಕ್ಷಾತ್ಕಾರ ಪ್ರಯತ್ನಕ್ಕಿಂತ ಮಿಗಿಲಾದ ತೀರ್ಥಯಾತ್ರೆಯಿಲ್ಲ.
ಪರಮಾತ್ಮನ ದಯೆಗಿಂತ ಆತ್ಮಬಂಧುವಿಲ್ಲ.
ಪರಮಾತ್ಮನಲ್ಲಿ ಭಯಭಕ್ತಿಯಿಂದ ನಡೆದುಕೊಳ್ಳುವುದರಲ್ಲುಂಟಾಗುವ ಸುಖಕ್ಕಿಂತ ಹೆಚ್ಚಿನ ಸುಖವಿಲ್ಲ.

## ೫. ಲಲ್ಲ ವಾಕ್ಯಗಳು

### ೧. ಪ್ರಣವ

೧ ನಾನು ಸದಾ ಪ್ರಣವವನ್ನು ಅನುಸಂಧಾನ ಮಾಡುತ್ತ ಲಿದ್ದೇನೆ
ಈಗಲೂ ಅದನ್ನೇ ಓದುತ್ತೇನೆ ಅಭ್ಯಾಸ ಮಾಡುತ್ತೇನೆ
'ಸೋಹಂ' ಎಂಬ ಎರಡರಲ್ಲಿ 'ಅಹಂ' ಎಂಬ ಅಭಿಮಾನ ವನ್ನು ಬಿಟ್ಟೆನು
ಆಗ ನಾನು ವಿಕಾಸವನ್ನು ಪಡೆದೆನು.

೨ ನೂರು ಮಾತುಗಳೇಕೆ? ನನ್ನದು ಒಂದೇ ಒಂದು ಮಾತು! ಅದೇ ಪ್ರಣವ
ನನ್ನ ಪಾದಗಳು ಅನೇಕ ದಾರಿಯಲ್ಲಿ ನೆಲೆಸಿದ್ದವು
ಯಾವುದಾದರೂ ಒಂದು ದಾರಿಯಲ್ಲಿ ನಡೆಯಬೇಕು
ನನ್ನ ಮಾತನ್ನು ಜನಗಳು ಯಾಕೆ ಕೇಳುವುದಿಲ್ಲ.

೩ ನನ್ನ ಓದೆಲ್ಲಾ ಒಂದೇಒಂದು ನುಡಿ—ಓಂ.
ಪ್ರಭುವೇ ಆ ಓಂಕಾರವನ್ನೇ ಗಟ್ಟಿಯಾಗಿ ಹಿಡಿದೆನು
ಅದನ್ನೇ ನಾನು ಸಾಣೆಹಿಡಿದು ರೂಪಿಸಿಕೊಂಡೆನು
'ನಾನು' ಎಂಬುದು ಸುಟ್ಟು ಬೂದಿಯಾಯಿತು. ಬಂಗಾರ ವಾದೆನು.

೪ ಯಾತಕ್ಕೆ ಜನಗಳು ಬೇರೆ ಬೇರೆ ಮಾರ್ಗಗಳಲ್ಲಿ ತೊಳಲುವರು
ಯಾತಕ್ಕೆ ನಿಜವನ್ನು ಹೇಳಿದರೂ ಕೇಳರು!
ಲಲ್ಲಾ ಸುಮ್ಮನೆ ಒಂದು ಪದದಲ್ಲೇ ಲೀನವಾಗಿದ್ದಾಳೆ
ಅದೇ ಪ್ರಣವ—ನೂರಾರು ಪದಗಳ್ಯಾಕೆ?

೫ ಓಂಕಾರವೇ ಮೊದಲು (ಆದಿ). ನಾನು ಅದನ್ನೇ ಕುರಿತು ಧ್ಯಾನಮಾಡಿದೆನು
ನಾನು ಓಂಕಾರವನ್ನೇ ಸಾಧಿಸಿದೆನು, ನಯವಾದೆನು

ನಾನು ನಾಶವಾಗುವ ದೇಹವನ್ನು ಬಿಟ್ಟು ನಾಶರಹಿತ
ದೇವರನ್ನು ಕಂಡೆನು
ಆದರಿಂದ ನಾನು ಪವಿತ್ರವಾದ ಸ್ಥಾನವನ್ನು ಹೊಂದಿದೆನು.

### ೨. ಲಲ್ಲೇಶ್ವರಿಯ ಸಾಧನೆ ಮತ್ತು ಅನುಭವೋದ್ಗಾರಗಳು

೬ ಓ ಮರುಳೆ, ನೀನು ಮೂಲವನ್ನು ಕಂಡು ಅಲ್ಲಿ ಹೆಜ್ಜೆಯನ್ನಿಟ್ಟು ಸ್ಥಿರವಾಗಿ ಊರಿನಿಂತಮೇಲೆ ಹೇಗೆ ಬೀಳುವಿ ?

[ವಿಶ್ವಕ್ಕೆಲ್ಲಾ ಕಾರಣನಾಗಿರುವ ಪರಮೇಶ್ವರನನ್ನು ತಿಳಿದು ಅಲ್ಲಿ ಸ್ಥಿರವಾಗಿ ನಿಂತರೆ ನಿನಗೆ ಅದಕ್ಕಿಂತಲೂ ಬೇರೆ ಆಶ್ರಯಬೇಕೆ ?]

೭ ಜನನ ಮರಣಗಳು ಶಿವನಿಗಿಲ್ಲ
ಉದಯಾಸ್ತಮಾನಗಳು ಸೂರ್ಯನಿಗಿಲ್ಲ
ಹಾಗೆಯೇ ಹಿಂದೆ ನಾವು ಇದ್ದೆವು ಇಂದೂ ಇದ್ದೇವೆ
ಮುಂದೆಯೂ ಇರುವೆವು.

[ಜೀವಾತ್ಮನು ನಿತ್ಯವೆಂಬ ತತ್ತ್ವವನ್ನು ಇಲ್ಲಿ ಸಾರಿದೆ ಮತ್ತು ಜೀವಾತ್ಮನು ಶಿವನಿಗಿಂತ ಬೇರೆಯಲ್ಲವೆಂಬ ಸೂಚನೆಯನ್ನು ಕೊಟ್ಟಿದೆ.]

೮ ನನಗೆ ಹುಟ್ಟೂ ಇಲ್ಲ. ಸಾವೂಇಲ್ಲ
ನನಗೆ ಕಷ್ಟ ಸುಖಗಳಲ್ಲಿ ಅಭಿಮಾನವೂ ಇಲ್ಲ
ನಾನು ಕಾಮಕ್ರೋಧಾದಿಗಳಿಗೆ ಹಿಂದಿದ್ದೇನೆ
ಸತ್ಯವಂತರ ಮುಂದಿದ್ದೇನೆ
ಪರಮಾತ್ಮನು ಸರ್ವವ್ಯಾಪಿಯಾಗಿದ್ದಾನೆ
ಈ ಅನುಭವ ಆಶ್ಚರ್ಯಕರವಾದದ್ದು.

೯ ತಂದೆತಾಯಿಗಳಾರು ! ಬಂಧುಬಳಗಗಳಾರು !
ಗೆಳೆಯರಾರು ! ತಿಳಿದೂ ತಿಳಿದೂ ಇವರ
ಅಭಿಮಾನದಲ್ಲಿ ತೊಳಲುವೆಯಾ ?

೧೦ ನಾನು ವಿಧಿನಿಯಮದಂತೆ ಬಂದೆ
ವಿಧಿ ನಿಯಮದಂತೆ ಹೋಗುವೆನು

ನನ್ನಗುರಿ ಪರತತ್ತ್ವ ಒಂದೇ
ನಾನು ಎಲ್ಲರಿಗೂ ಮಿತ್ರ
ಅರಿಯದ ವಕ್ರ ಜೀವಿಗಳು ನನ್ನನ್ನು ಏನುಮಾಡಿಯಾರು ?

೧೧ ಅಸತ್ಯ ಮೋಸ ತಪ್ಪುತಿಳಿವಳಿಕೆಗಳನ್ನು ಬಿಟ್ಟೆನು
ಇದನ್ನು ನನ್ನ ಮನಸ್ಸಿಗೂ ಕಲಿಸಿದೆನು
ಜನತೆಗೂ ಬೋಧಿಸಿದೆನು
ಜನತೆಯಲ್ಲೇ ಆ ಪರಮಾತ್ಮನನ್ನು ಕಂಡೆನು
ಇನ್ನು ನನಗೆ ಪ್ರಪಂಚವ್ಯವಹಾರದಲ್ಲಿ
ದ್ವೇಷವೆಲ್ಲಿಯದು ?

೧೨ ನಾನು ಏನನ್ನು ಓದಿ ತಿಳಿದುಕೊಂಡೆನೋ
ಅದರಂತೆ ನಡೆದೆನು
ಓದಿನಿಂದ ತಿಳಿಯದೆ ಇರುವುದನ್ನೂ ತಿಳಿದೆನು
ನರಿಯ ಉಪಾಯದಂತೆ ಕಾಡಿನಲ್ಲಿದ್ದ
ಸಿಂಹವನ್ನು ಹಿಡಿದು ಪಳಗಿಸಿದೆನು
[ಮನಸ್ಸಿನ ಮೋಹ ಆಸೆಗಳನ್ನು ಗೆದ್ದೆನು]
ನಾನು ಏನು ಅರಿದೆನೋ ಅದನ್ನೇ ಆಚರಿಸಿದೆನು
ಇತರರಿಗೂ ಬೋಧಿಸಿದೆನು
ಅದೇ ನನ್ನ ವಿಜಯ.

೧೩ ಎಂದಿಗೆ ನನ್ನ ನಾಚಿಕೆ ಕಳೆದೀತು
ಎಂದಿಗೆ ನಾನು ಹೊಗಳಿಕೆ ತೆಗಳಿಕೆ ಸಹಿಸೇನು
ಎಂದಿಗೆ ನನ್ನಲ್ಲಿ ಸಂಕೋಚವು ಸುಟ್ಟು ಬೂದಿಯಾದೀತು
ಎಂದಿಗೆ ಒಳ್ಳೆಯ ಮತ್ತು ಕೆಟ್ಟ ವಿಷಯಗಳು
ಕಿವಿಗೆ ಕೇಳದೆ ಕಣ್ಣಿಗೆ ಕಾಣದೆ ಹೋದಾವು
ಎಂದಿಗೆ ಆ ಪರಮೇಶ್ವರನ ಪ್ರೇರಣೆಯು ನನ್ನ
ಮನಸ್ಸಿನಲ್ಲಿ ಮೊಳಗೀತು
ಎಂದಿಗೆ ನನ್ನ ಜ್ಞಾನಜ್ಯೋತಿಯು ಆರದೆ ಬೆಳಗೀತು
ಎಂದಿಗೆ ನನಗೆ ಪೂರ್ಣ ಮನಶ್ಶಾಂತಿ ದೊರೆತೀತು !

೧೪ ನನ್ನನ್ನು ಅವಮಾನಿಸಿದರು ತೆಗಳಿದರು
ಅಪಕೀರ್ತಿಯನ್ನುಂಟುಮಾಡಿದರು
ಆದರೂ ಆಸೆಯು ನನ್ನನ್ನು ಬಿಡಲಿಲ್ಲ
ನಾನು ಸಿದ್ಧಿಯನ್ನು ಪಡೆದನಂತರ ನನ್ನಲ್ಲಿ ಉಳಿಯುವುದೇನಿದೆ
ಆಗ ಸಂತೋಷ ಸಂತಾಪಗಳು ನನ್ನಲ್ಲಿ ಯಾವ ಪರಿಣಾಮ
ವನ್ನುಂಟುಮಾಡಲಾರವು.

೧೫ ಓ ಶರೀರಿಯೇ ನೀನು ದೇಹವನ್ನು ಶೃಂಗರಿಸುವೆಯಾ ?
ಒಳ್ಳೇ ಆಹಾರದಿಂದ ಪೋಷಿಸುವೆಯಾ
ನಿರ್ಮಲ ಮನಸ್ಸಿನಿಂದ ಒಳಗೆ ಆ ಪರಮಾತ್ಮನನ್ನು ಹುಡುಕು.
ಅಸೂಯೆ ಅಜ್ಞಾನ ಮಾಯವಾಗಲಿ
ಆಗ ನಿನ್ನ ಶರೀರವೆಂದರೆ ಆ ಪರಮಾತ್ಮನ ಒಂದು ಅಂಶವೆಂದು
ಕಾಣುವಿ
ಆಗ ಸೌಂದರ್ಯ ಪ್ರಕಾಶ ಬೆಳಗೀತು.

೧೬ ನಾನು ನದಿಯಂತೆ ಭೋರ್ಗರೆದೆನು
ಹಾಗೆಯೇ ಕ್ಷೇತ್ರದಲ್ಲಿ ಬೆಳೆಯನ್ನು ಬೆಳೆದೆನು
ಕೊನೆಗೆ ಪರಮಾತ್ಮನ ದಯೆಯಿಂದ ಬೆಳಕನ್ನು ಕಂಡೆನು.

೧೭ ಜನ್ಮವೆತ್ತಿದ ನಾನು ಅತ್ಯಾಶೆಯನ್ನು ಪಡಲಿಲ್ಲ
ಆಸೆಗಳನ್ನೂ ಸುಖಾನುಭವಗಳನ್ನು ಕೋರಲಿಲ್ಲ
ಸರಳಜೀವನ ನಡೆಸಿದೆ
ದಾರಿದ್ರ್ಯವನ್ನೂ ದುಃಖವನ್ನೂ ಅನುಭವಿಸಿದೆ
ಪರಮಾತ್ಮನ ಧ್ಯಾನವನ್ನು ಮಾಡಿದೆ.

೧೮ ಕರ್ಮಗಳನ್ನು ಅನುಭವಿಸಿ ಕಳೆಯಲಾಗಿ
ಸ್ವರೂಪವು ಸ್ವಚ್ಛವಾಯಿತು
ಅಂತರಂಗ ಶುದ್ಧಿ ಏರ್ಪಟ್ಟಿತು—ಅನಂತರ
ಎಲ್ಲಾ ವ್ಯವಹಾರಗಳೂ ಶಿವನ ಸಂಕಲ್ಪದಿಂದ ನಡೆಯುತ್ತವೆಂದು
ಗೋಚರವಾಯಿತು.

೧೯ ಸಾಮಾನ್ಯಜನಗಳು ನನ್ನನ್ನು ಕುರುಡ ಕಿವುಡ ಮೂಗ ಎಂದು
ಭಾವಿಸಬಹುದು
ಶಿವಾನುಭವದಲ್ಲಿ ಆನಂದವನ್ನನುಭವಿಸುವ
ಪರಿಸ್ಥಿತಿಯನ್ನು ಪಡೆದನಂತರ
ಜಿಜ್ಞಾಸೆ ಏಕೆ ಬೇಕು !

೨೦ ಎಲ್ಲಾಕಡೆಯಲ್ಲಿಯೂ ತುಂಬಿರುವ ಸೂರ್ಯನ
ಬೆಳಕು ಮಣ್ಣು ಮುದ್ದೆಯಲ್ಲಿಯಾಕೆ ಪ್ರತಿಫಲಿಸುವುದಿಲ್ಲ.
ಬೆಳಗಿದ ಕನ್ನಡಿಯೊಳು ಮುಖ ಬಿಂಬವು ಬೆಳಗುವಂತೆ
ನಿಷ್ಪಾಪಿಯ ಮನದೊಳು ಶಿವಕಳೆ ತೋರುವುದು.

೨೧ ಬಹಳಕಾಲ ಬಳಲಿದೆನು, ತೊಳಲಿದೆನು
ಎದುರುನೋಡಿದೆನು—ಯಾವಾಗ ನಾನು ಆ ಶಿವನಿಂದ
ಬೇರೆಯಲ್ಲವೆಂಬ ತಿಳಿವಳಿಕೆ ಯುಂಟಾಯಿತೋ
ಅಂದು ನನ್ನ ಹೃದಯತುಂಬಿತು
ನನ್ನ ಜಿಜ್ಞಾಸೆ ಕೊನೆಗಂಡಿತು
ನನ್ನ ತಿಳಿವಳಿಕೆ ಪೂರ್ಣವಾಯಿತು
ನನ್ನ ಸಂತಾಪ ಮಾಯವಾಯಿತು.

೨೨ ನನ್ನ ಹೃದಯವನ್ನು ಸುಟ್ಟು ಬೂದಿ ಮಾಡಿದೆನು
ಇದರಿಂದ ನಾನು ಬದುಕುತ್ತೇನೆ,
ಸಾಯುತ್ತೇನೆಂಬುದನ್ನು ಹೇಗೆ ತಿಳಿಯಲಿ?
ಪ್ರೇಮದ ಒರಳಿನಲ್ಲಿ ನನ್ನ ಹೃದಯವನ್ನು ಅರೆದೆನು
ದುರಾಶೆ ಬಿಟ್ಟಿತು,
ಶಾಂತಿ ದೊರೆಯಿತು.

೨೩ ನಾನು ಕಣ್ಣಿನಲ್ಲಿ ಕಂಡದ್ದು ಕಿವಿಯಲ್ಲಿಕೇಳಿದ್ದು ಪ್ರತ್ಯಕ್ಷವಾದರೆ
ನಾನು ಬದುಕಿದ್ದೇನೆಂದು ತಿಳಿಯುತ್ತೇನೆ.
ನಾನು ಸಾಯಲಿಲ್ಲ, ಸಾಯುವುದೂ ಇಲ್ಲ.

೨೪ ನಾನು ಅಂತರಂಗದ ಕಶ್ಮಲವನ್ನು ಕಳೆದೆನು
ಆಸೆಗಳಿಂದ ಬಿಡುಗಡೆಯನ್ನು ಪಡೆದೆನು
ಹೃದಯ ನಿರ್ಮಲವಾಯಿತು
ಶಾಂತಿ ಲಭಿಸಿತು.

೨೫ ಎಲ್ಲಿಗೆ ಹೋದರೂ ಅಲ್ಲಿ ಆತನನ್ನು ಕಂಡೆ
ಎಲ್ಲವೂ ಆತನೇ ವಿಶ್ವವೂ ಆತನೇ
ಆತನನ್ನು ಬಿಟ್ಟು ನಾನೆಲ್ಲಿ!

೨೬ ನಾನು ಮನಸಾ ವಾಚಾಕರ್ಮಣಾ ಶಿವನ ಕಡೆ
ಗಮನವನ್ನು ಹರಿಸಿದೆನು
ಅದರ ಪರಿಣಾಮವಾಗಿ ಸತ್ಯದ ಘಂಟಾನಾದವನ್ನು ಕೇಳಿದೆನು
ನಿಶ್ಚಲವಾದ ಧ್ಯಾನದಿಂದ ಆ ಪರಂಜ್ಯೋತಿಯನ್ನು ಕಂಡೆನು.

೨೭ ಓದುವುದು ಸುಲಭ ಅದರಂತೆ ನಡೆಯುವುದು ಕಷ್ಟ
ತತ್ತ್ವಸಾಕ್ಷಾತ್ಕಾರವು ಅತಿ ಸೂಕ್ಷ್ಮವಾದದ್ದು
ಮತ್ತು ಕಷ್ಟಕರವಾದದ್ದು
ಚಿದಾನಂದಾನುಭವದಿಂದ ನಾನು ಗ್ರಂಥಗಳನ್ನು ಮರೆತೆನು.

೨೮ ಭಾವನಾಶಕ್ತಿ ಕಡಮೆಯಾಗಿರುವವರು ಗಿಣಿಯು ಪಂಜರದಲ್ಲಿ
ರಾಮ ರಾಮ ಎಂದು ಉಚ್ಚರಿಸುವಂತೆ
ಗ್ರಂಥಗಳನ್ನು ಓದುತ್ತಾರೆ.
ನಾನೂ ಗೀತೆಯನ್ನು ಓದಿದ್ದೇನೆ
ಇನ್ನೂ ಓದುತ್ತಲಿದ್ದೇನೆ! ಆದರೆ?

[ವಿಷಯವನ್ನು ತಿಳಿದರೆ ಸಾಲದು. ಅದರ ಅನುಭವವುಂಟಾಗ ಬೇಕು. ಅನುಭವಕ್ಕೆ ಬರುವವರೆಗೂ ಸಾಹಸಪಡಬೇಕೆಂಬ ಉಪದೇಶ ವನ್ನು ಇಲ್ಲಿ ಕಾಣಬಹುದು.]

೨೯ ಜೀವನವೆಂಬ ನೀರಿನಿಂದ ಕಲ್ಮಷವನ್ನು ತೆಗೆದರೆ
ಕನ್ನಡಿಯಂತೆ ಸ್ವಚ್ಛವಾಗಿಯೂ
ಮಂಜಿಗಿಂತ ಬೆಳಗುವುದಾಗಿಯೂ ಆದೀತು.
ಪ್ರಭುವೆ! ನಿನ್ನ ಸಂಕಲ್ಪದಿಂದ ಜನನ ಮರಣ
ಕೇಳುವುದು ನೋಡುವುದು ಸಾಮರ್ಥ್ಯ
ಅಸಾಮರ್ಥ್ಯಗಳುಂಟಾಗುತ್ತವೆ.
ಶಿವನೆ! ಯಾವಾಗ ನೀನು ಸತ್ಯವನ್ನು ನನ್ನಲ್ಲಿ ಹೊರಹೊಮ್ಮಿಸುವೆ
ಈ ವಿಚಾರ ಇನ್ನು ಸಾಕು
ನಾನು ಶಿವನಿಂದ ಬೇರೆಯಲ್ಲ.

೩೦ ನಾನು ಒಂದು ದಾರಿಯಲ್ಲಿ ಬಂದೆ
ನಾನು ಹೋಗಬೇಕಾದ ದಾರಿಯಲ್ಲಿ ಹೋಗಲಿಲ್ಲ
ಈಗ ನದಿಯನ್ನು ದಾಟಬೇಕಾಗಿದೆ
ಆ ನದಿಯನ್ನು ದಾಟಲು ದೋಣಿಯವನಿಗೆ
ಹಣವನ್ನು ತೆರಬೇಕು
ನನ್ನಲ್ಲಿ ಹುಡುಕಿದರೆ ಹಣವಿಲ್ಲ
ನನ್ನನ್ನು ದಾಟಿಸುವ ಉಪಾಯವೇನು?

ಪ್ರ: [ಜನನ ಮರಣ ರೂಪವಾದ ಸಂಸಾರವು ಅನಂತವಾಗಿದೆ ಅದನ್ನು ದಾಟಲು ನಿಜವಾದ ತಿಳಿವಳಿಕೆ ಬೇಕು ಅದನ್ನು ಹೇಗೆ ಪಡೆಯಲಿ.

ಉ: ಉಪಾಯ—ಈಶ್ವರೋಪಾಸನೆ.]

೩೧ ಜನಗಳು ಸಾವಿರಾರು ಬಗೆ ಬಯ್ಯಲಿ-ಉದಾಸೀನಭಾವದಿಂದ
ನನ್ನ ಮನಸ್ಸನ್ನು ಮಲಿನ ಮಾಡಿಕೊಳ್ಳುವುದಿಲ್ಲ.
ಕನ್ನಡಿಯು ಯಾವರೀತಿ ಧೂಳಿನಿಂದ ಮಲಿನವಾಗುವುದಿಲ್ಲವೋ
ಹಾಗೆ ಜನಾಪವಾದದಿಂದ, ಪರಶಿವಾನುಸಂಧಾನದಲ್ಲಿರುವ
ನನ್ನ ಮನಸ್ಸು ಉದ್ವೇಗಗೊಳ್ಳುವುದಿಲ್ಲ
ಮಲಿನವಾಗುವುದಿಲ್ಲ.

೩೨ ಆ ಪರಮಾತ್ಮನನ್ನು ಕಾಣಲು ಬಹುದೂರ ಹೋದೆ. ಆದರೆ
ಹಿಂದಿರುಗಿ ನನ್ನಲ್ಲಿಯೇ ಆತನನ್ನು ಕಂಡೆ
ತಿರುಕನಂತೆ ಯಾಕೆ ತಿರುಗುವಿ–ಪ್ರಯತ್ನಪಡು
ನಿನ್ನ ಹೃದಯದಲ್ಲಿಯೇ ಆನಂದಬಾಷ್ಪಗಳ ಸಮೇತ
ಆತನನ್ನು ನೋಡುವಿ.

೩೩ ನಾನು ಆತನನ್ನು ಹುಡುಕಿದೆ
ಶಕ್ತಿಮೀರಿ ಸಾಹಸ ಪಟ್ಟೆ
ಎದುರು ನೋಡಿದೆ
ಅನುಸಂಧಾನ ಮಾಡಿದೆ
ಮೌನದಿಂದ ಧ್ಯಾನ ಮಾಡಿದೆ
ಕೊನೆಗೆ ಆತನ ಸಾಕ್ಷಾತ್ಕಾರವಾಯಿತು

## ೩. ಉಪದೇಶ

೩೪ ಬಾಲ್ಯ ಯೌವನ ವಾರ್ಧಿಕ್ಯ ಮತ್ತು ಮರಣಗಳು
ನದೀ ಪ್ರವಾಹದಂತೆ ನಡೆಯುತ್ತವೆ
ಕುರುಡನಂತೆ ಇವುಗಳನ್ನು ಯಾಕೆ ಅನುಭವಿಸಬೇಕು. (ವಿವೇಚನೆ
ಯಿಲ್ಲದೆ)
ಮಿತ್ರನೆ ಒಳಗಿರುವ ಶಿವನನ್ನು ಹುಡುಕಿ ಕಾಣುವವನಾಗು
ಈ ನನ್ನ ಮಾತನ್ನು ಕೇಳು–ವಿಶ್ವಾಸವಿಡು

೩೫ ನೀರನ್ನು ಕೈಯಲ್ಲಿ ಹಿಡಿಯಲಾದೀತೆ
ಗಾಳಿಯನ್ನು ಕೈಯಿಂದ ತಡೆಯಲಾದೀತೆ
ಪಂಚೇಂದ್ರಿಯಗಳನ್ನು ನಿಗ್ರಹಿಸಿದವನು
ಅಜ್ಞಾನವೆಂಬ ಕತ್ತಲಲ್ಲಿ ಸೂರ್ಯನನ್ನು ಕಾಣಬಲ್ಲನು
[ಸೂರ್ಯ–ಪರತತ್ತ್ವ]

೩೬ ಶಿವನು ಸರ್ವವ್ಯಾಪಿ
ಒಂದು ವ್ಯಕ್ತಿಗೂ ಇನ್ನೊಂದು ವ್ಯಕ್ತಿಗೂ ಭೇದವನ್ನೆಣಿಸಬೇಡ
ಓ, ಪಂಡಿತರೆ ಈ ತತ್ತ್ವವನ್ನು ಮನಗಾಣಿರಿ.
ಈ ಸಾಮ್ಯಭಾವವೇ ವಿಕಾಸಕ್ಕೆ ಮಾರ್ಗ

೩೭ ಶಿವ ಶಿವ ಎಂದರೆ ಶಿವನು ಪ್ರಸನ್ನನಾಗುವುದಿಲ್ಲ
ತುಪ್ಪ ತುಪ್ಪ ಎಂದರೆ ಶರೀರಕ್ಕೆ ಪುಷ್ಟಿಯಾದೀತೆ !
ತುಪ್ಪವನ್ನು ತಿಂದರೆ ಶರೀರಕ್ಕೆ ಬಲ
ನಿನಗೆ ಅನುಭವಿಸುವುದಕ್ಕಾಗದಿದ್ದರೆ ಇತರರಿಗೆ ಹಂಚು

[ತನ್ನ ತಿಳಿವಳಿಕೆಯನ್ನು ಆಚರಣೆಯಲ್ಲಿಟ್ಟುಕೊಳ್ಳಬೇಕು. ತಾನು ಶ್ರೇಯಸ್ಸನ್ನು ಪಡೆಯುವುದು ಮಾತ್ರವಲ್ಲ ಇತರರಿಗೂ ಜ್ಞಾನವನ್ನು ಬೋಧಿಸಬೇಕು, ಹಂಚಬೇಕು.]

೩೮ ಸರ್ವವ್ಯಾಪಿಯಾಗಿರುವ ಶಿವನು ನಿನ್ನಲ್ಲಿರುವನು
ಆತನನ್ನು ಭಜಿಸು—ಆತನನ್ನು ಸಾಕ್ಷಾತ್ಕರಿಸಿಕೊಂಡರೆ
ನಿನ್ನ ಭಾವನೆಯಂತೆ ನಿನ್ನ ಜೀವನವು ರೂಪುಗೊಳ್ಳುವುದು—

೩೯ ಗೃಹಸ್ಥನಾಗು ಸನ್ಯಾಸಿಯಾಗು
ನಿನಗೆ ಹಿತವಾದ ದಾರಿಯನ್ನು ಅನುಸರಿಸು.
ಆಸೆಗಳು ನಿನ್ನ ಹೃದಯವನ್ನು ಕಾಡದಿದ್ದಲ್ಲಿ
ನಿನಗೆ ತಿಳಿವಳಿಕೆ ಬಂತೆಂದು ತಿಳಿ
ಆಗ ನಿನ್ನ ಜೀವನವು ನಿರ್ಮಲವಾದೀತು

೪೦ ನೀನು ಎಚ್ಚರತಪ್ಪಿದ್ದೀ—ಅಡಿಯನ್ನು ಮುಂದಿಡು
ವೇಗದಿಂದ ನಡೆ—ಪ್ರವಾಸವನ್ನು ಕೊನೆವರೆಗೂ ಸಾಗಿಸು
ನಿನ್ನ ತಿಳಿವಳಿಕೆ ಜಾಗ್ರತವಾಗಿ ಮುಂದುವರೆಯಲಿ—
ಇದರ ಅವಶ್ಯಕತೆ ಇದೆ—

ಮಿತ್ರನನ್ನು ಹುಡುಕು, ಬೆಳಕು ತೋರುವುದು.
ನಿನ್ನಪಾದಗಳಿಗೆ ರೆಕ್ಕೆಗಳು ಬರಲಿ.

೪೧ ಕಹಿಯಾದದ್ದು ಸಿಹಿ (ಇಂದ್ರಿಯನಿಗ್ರಹ)
ಸಿಹಿಯಾದದ್ದು ವಿಷ (ವಿಷಯೋಪಭೋಗ)
ಇವೆರಡರಲ್ಲಿ ಆರಿಸುವುದು ಅವನವನ ಸ್ವಭಾವಕ್ಕೆ ತಕ್ಕದ್ದು
ಪುರಪ್ರವೇಶಕ್ಕಿಚ್ಛಿಸಿ ಪ್ರಯತ್ನಿಸಿದವನು ಪುರವನ್ನು ಸೇರುವನು

೪೨ ದುಃಖದಲ್ಲಿ ಬೆಂದು ಕೊಳೆಯನ್ನು ಕಳೆದರೆ
ಕನ್ನಡಿಗಿಂತ ಪ್ರಕಾಶವಾಗಿ ಮಂಜಿಗಿಂತ ಶುಭ್ರವಾಗಿ
ಬೆಳಗುವೆ
ಸ್ವೇಚ್ಛೆಯಿಂದ ಬದುಕುವೆ, ಸ್ವೇಚ್ಛೆಯಿಂದ ಸಾಯುವೆ

೪೩ ಓದುವುದು ಸುಲಭ ಓದಿದಂತೆ ನಡೆಯುವುದು ಕಷ್ಟ
ಸತ್ಯವನ್ನು ಹುಡುಕುವುದು ಕಷ್ಟತರವಾದದ್ದು
ಸೂಕ್ಷ್ಮವಾದದ್ದು
ನಾನು ಶಾಸ್ತ್ರಗಳನ್ನು ಮರೆತೆನು—ತೀವ್ರವಾದ
ಅಭ್ಯಾಸಗಳಿಂದ ಆನಂದವು ಲಭಿಸಿತು
ಓದುವುದರಿಂದುಂಟಾದ ತಿಳಿವಳಿಕೆಯಿಂದಾಚೆ
ಇರುವ ಸತ್ಯವನ್ನು ಕಂಡೆ

೪೪ ನೀನು ಹಸಿವು ಬಾಯಾರಿಕೆಗಳ ತೃಪ್ತಿಗಾಗಿ ಆಸೆ ಪಡಬೇಡ
ನೀನು ಕಷ್ಟದಿಂದ ಎದೆಗುಂದಿದಾಗ್ಗೆ ನಿರುತ್ಸಾಹಿಯಾಗಬೇಡ
ಉಪವಾಸಗಳನ್ನುಮಾಡಿ ದಣಿಯಬೇಡ
ನೀನು ಉಪಕಾರಿ ಜೀವಿಯಾಗು—ಅದು ನಿನ್ನ ಕರ್ತವ್ಯ

೪೫ ನೀನು ಯಾತಕ್ಕೆ ಕುರುಡನ ಹಾಗೆ ಕೈಯಿಂದ
ತಡಕುತ್ತಿದ್ದೀಯೆ?

ನೀನು ಬುದ್ಧಿವಂತನಾದರೆ ಒಳಗೆ ಪ್ರವೇಶಿಸು
ಅಗೋ! ಶಿವನು ಅಲ್ಲಿದ್ದಾನೆ
ನೀನು ಇನ್ನೆಲ್ಲಿಯೂ ಹುಡುಕಬೇಕಾದ ಕಾರಣವಿಲ್ಲ
ಮಿತ್ರಾ, ನನ್ನ ಮಾತಿನಲ್ಲಿ ವಿಶ್ವಾಸವನ್ನಿಡು

ಇಹಲೋಕದಲ್ಲಿ ಇವನಿಗುಂಟಾಗುವ ಎಡರುತೊಡರುಗಳಿದ್ದರೂ ಹಿತವನ್ನು ಬಯಸುವುದು ಪರಿಶುದ್ಧವಾದ ಜೀವನದ ಆದರ್ಶ. ಒಂದು ದೃಷ್ಟಾಂತದಿಂದ ಲಲ್ಲೇಶ್ವರಿಯು ಈ ವಿಷಯವನ್ನು ಸ್ಪಷ್ಟಪಡಿಸುತ್ತಾಳೆ.

೪೬ ಹತ್ತಿ ತನ್ನ ಉಗಮದಲ್ಲಿ ಬಹಳ ಸ್ವಚ್ಛವಾಗಿರುತ್ತದೆ
ಹೂವಿನಂತೆ ಅರಳುತ್ತದೆ.
ಬಿಡಿಸಿದನಂತರ ಕಟ್ಟಿಗೆಯಿಂದ ಹೊಡೆದು
ಬಿಲ್ಲಿನಿಂದ ಎಕ್ಕುತ್ತಾರೆ.
ಚರಕದಮೇಲೆ ದಾರಮಾಡಿ ಹುರಿಮಾಡುತ್ತಾರೆ.
ಅನೇಕ ಬಣ್ಣಗಳನ್ನು ಹಚ್ಚಿ ಆದಾರವನ್ನು
ಕೆಚ್ಚಿ ಮಗ್ಗಕ್ಕೆ ಹಾಕಿ ನಿಲ್ಲಿಸುತ್ತಾರೆ.
ಅನಂತರ ಮಗ್ಗವನ್ನು ತುಳಿದು ನೇಯ್ದು ಬಟ್ಟೆ
ಮಾಡುತ್ತಾರೆ.
ಅಗಸರವನು ಚೌಳುಹಾಕಿ ಕುಕ್ಕಿ ಸ್ವಚ್ಛಮಾಡುತ್ತಾನೆ.
ಕೊನೆಗೆ ಸಿಂಪಿಗನು ಕತ್ತರಿಸಿ ಅಂದವಾದ ಉಪಯೋಗಕ್ಕೆ
ಬರುವ ಉಡುಪನ್ನು ಮಾಡುತ್ತಾನೆ.

ಹೀಗೆ ಹತ್ತಿಯು ನಾನಾ ರೀತಿಯಲ್ಲಿ ಹೊಡೆತಕ್ಕೆ ಸಿಕ್ಕಿ ಸುಂದರವಾದ ಉಡುಪಾಗುವಂತೆ ಲಲ್ಲೇಶ್ವರಿಯು ನಾನಾ ವಿಧವಾದ ಕಷ್ಟಗಳನ್ನನುಭವಿಸಿ ಜ್ಞಾನಿಯಾದಳು.

೪೭ ಸ್ಥೂಲವಾಗಿಯೂ ಸೂಕ್ಷ್ಮವಾಗಿಯೂ ವಿಶ್ವವೆಲ್ಲಾ ನೀನೆ ಆಗಿದ್ದಿ
ಭೂಮಿ ಸ್ವರ್ಗ ಬೆಳಕು ಕತ್ತಲೆ ಗಾಳಿಮೊದಲಾದ ಪಂಚಮಹಾ
ಭೂತಗಳು ನೀನೆ ಆಗಿದ್ದಿ

ನಾವು ನಿನಗರ್ಪಿಸುವ ಹೂಗಳು ಕೂಡ ನೀನೆ ಆಗಿದ್ದಿ.
ನೀನೆ ಯಜ್ಞದ ಹವಿಸ್ಸು
ನೀನೆ ಅಭಿಷೇಕ ಮಾಡುವ ಜಲ
ನೀನೆ ಎಲ್ಲಾ ತೊಂದರೆಗಳನ್ನು ಹೋಗಲಾಡಿಸುವ ದಿವ್ಯೌಷಧಿ
ನನ್ನಿಂದ ನಿನಗೇನಾಗಬೇಕು!
ನಾನು ಎಲ್ಲಿಂದ ಬಂದೆ ಯಾವ ಮಾರ್ಗದಲ್ಲಿ ಹೋಗುತ್ತಿದ್ದೇನೆ,
ಎಲ್ಲಿಗೆ ಹೋಗಲಿದ್ದೇನೆ
ನನಗೆ ಆಶ್ರಯ ನೀನೆ ಆಗಿದ್ದೀಯಾ
ನಾನು ಕೇವಲ ಉಚ್ಛ್ವಾಸಮಾತ್ರ.

## ೪. ಆತ್ಮಸಂಬೋಧನ

೪೮ ಆಸೆ, ಕಾಮ, ಅಹಂಕಾರ ಈ ಮೂರು ಕಳ್ಳರನ್ನೂ ನಾಶಮಾಡು
ಇತರರಿಗೆ ಸೇವೆಮಾಡುವುದನ್ನು ಕಲಿ.
ಈ ಕಳ್ಳರು ಸ್ವಲ್ಪಕಾಲ ಮಾತ್ರ ಇರುವರು
ಭಕ್ತಿಯು ಶಾಶ್ವತವಾದದ್ದು
ಇಲ್ಲಿ ಮಾನವನು ಸಂಪಾದಿಸುವುದು ಯಾವುದೂ ಇಲ್ಲ
ಆ ಪರಮಾತ್ಮನ ಸೇವೆಯೇ ಇವನ ಶಕ್ತಿ. ಆತ್ಮಜ್ಞಾನವನ್ನು ಪಡೆ
ಅದೇ ಜ್ಞಾನಜ್ಯೋತಿಯ ಉಗಮ.

೪೯ ಕಷ್ಟಗಳನ್ನು ಸಹಿಸುವುದು
ಬೀಸುವ ಕಲ್ಲಿನಲ್ಲಿ ಪುಡಿ ಪುಡಿ ಮಾಡಿದಹಾಗೆ
ಹಗಲಿನಲ್ಲಿ ಕತ್ತಲು ಕವಿದಹಾಗೆ
ಮಿಂಚು ಗುಡುಗುಗಳಹಾಗೆ
ಬರ್ಪುದು ತಪ್ಪದು, ಬಹುದುಃಖಬೇಡ
ಓ ಪ್ರಭುವೇ, ಸಮಾಧಾನ ಚಿತ್ತದಿಂದ ನಿರ್ವಹಿಸುವಂತೆಮಾಡು

೫೦ ನದಿಯು ಯಾವಾಗಲೂ ಹರಿಯುತ್ತಿದ್ದರೆ ಅದಕ್ಕೆ ಬೇಸರವೆ,
ಸೂರ್ಯನು ಭೂಮಿಯ ಸುತ್ತ ಸುತ್ತುತ್ತಿದ್ದರೆ ಅವನಿಗೆ ಶ್ರಮವೆ,

ಚಂದ್ರನು ವೃದ್ಧಿಕ್ಷಯಗಳನ್ನು ಹೊಂದುತ್ತಿದ್ದರೆ ಅವನಿಗೆ ದಣಿವೆ,
ಚಾಡಿಕೋರರಿಗೆ ದೂಷಿಸುವುದರಲ್ಲಿ ಆಯಾಸವೆ, ಅದು ಅವರ
ಸ್ವಭಾವ.

೫೧ ದೇಹಾಭಿಮಾನವನ್ನು ಬಿಟ್ಟವರು ಮಾನವರಲ್ಲ-ಮಹಾತ್ಮರು.
ದೇಹ ಕೃಶವಾದ ಮೇಲೆ ಹೊರಗಿನವರು ಬಂದು ಸರಿಪಡಿಸುವರೆ?
ಬರೀ ದೇಹ ಪೋಷಣೆಯಿಂದಲೇ ನೀನು ಎಲ್ಲಿಗೂ ಮುಟ್ಟಲಾರೆ
ದೇಹವನ್ನು ತೀರಾ ಶೋಷಿಸುವುದರಿಂದಲೇ ನೀನು ಏನನ್ನೂ
ಸಾಧಿಸಲಾರೆ
ಮಿತವನ್ನನುಸರಿಸು, ನೀನು ಬದುಕುತ್ತೀ, ಸಾಯುವುದಿಲ್ಲ.
ಪರಮಾತ್ಮನನ್ನು ಸದಾನೆನೆಯುತ್ತಿರು
ಅಂತರಂಗದ ಬಾಗಿಲು ತೆರೆಯುವುದು.

೫೨ ನಾನು ನೇರವಾಗಿ ಬಂದೆನು
ನೇರವಾಗಿ ಹೋಗುವೆನು
ವಕ್ರ ಮನುಷ್ಯರು ನನ್ನನ್ನು ಏನುಮಾಡಿಯಾರು!
ನಾನು ಮೊದಲಿಂದಲೂ ಅವನನ್ನು ಬಲ್ಲೆ
ಹಿಂದಿನ ಪರಿಚಯವಿರುವ ಅವನ ಪ್ರೀತಿಗೆ ಪಾತ್ರಳಾದ,
ನನ್ನನ್ನು ಯಾರುತಾನೆ ಏನುಮಾಡಬಲ್ಲರು.
(ನೇರ–ಋಜುಮಾರ್ಗ)

೫೩ ನಿನ್ನ ಮುಖವು ಎಷ್ಟು ಮನೋಹರವಾಗಿದೆ.
ಆದರೆ ನಿನ್ನ ಹೃದಯ ಕಲ್ಲಿನಂತಿದೆ
ಓದುವುದರಲ್ಲೇ ಬರೆಯುವುದರಲ್ಲೇ
ನಿನ್ನ ತುಟಿಗಳು ಬೆರಳುಗಳು ಸವೆದುಹೋಗಿವೆ
ಒಳಗೆ ಸೇರಿಕೊಂಡಿರುವ ದ್ವೇಷವು ನಿನ್ನನ್ನು ಬಿಟ್ಟು ಹೋಗಲಿಲ್ಲ.

೫೪ ಈ ಶರೀರಕ್ಕೆ ನಾಮಕರಣ ಮಾಡುವುದಾದರೆ
ನಿರ್ಲಿಪ್ತನಾದ ಆ ಪರಮಾತ್ಮನ ಹೆಸರನ್ನಿಡು

ಅದನ್ನೇ ನೆನೆಯುತ್ತಿರು
ಅವನೇ ನಾನು, ನಾನೇ ಅವನು
ಎಂದು ಉದ್ಘೋಷಿಸುವುದಕ್ಕೆ ಅರ್ಹನಾಗುತ್ತೀ
ನಾನೇ ನಾನು ಎಂಬುದು ಬಿಟ್ಟು ಹೋಗುತ್ತದೆ.

೫೫ ನಾನು ಹೇಗಾದರೂ ಅವನನ್ನು ಕಾಣಬೇಕು
ಸಾಗರವೇ ನಮ್ಮಿಬ್ಬರಿಗೂ ಅಡ್ಡವಿದೆ
ನನ್ನದು ದುರ್ಬಲವಾದ ಮನಸ್ಸು
ಈ ಮನಸ್ಸಿನಿಂದ ದೋಣಿ ಮಾಡುವುದು ಹೇಗೆ
ಅದಕ್ಕೆ ಮಿತ್ರನನ್ನು ಹುಡುಕು.
ಪ್ರಾಣವಾಯುವೇ ನಿನ್ನ ಮಿತ್ರ
ಅವನನ್ನು ಗಟ್ಟಿಯಾಗಿಹಿಡಿ
ಅವನು ಪ್ರಯೋಗದ ಯುಕ್ತಿಯಿಂದ
ನಿನ್ನನ್ನು ಆಚೆ-ದಡವನ್ನು ಮುಟ್ಟಿಸುವನು.

೫೬ ಮಾನವನು ಶಿವನಿಗೆ ಕೊಡತಕ್ಕದ್ದೇನಿದೆ?
ಆತ್ಮಜ್ಞಾನದಿಂದ ಯಾವುದು ಲಭಿಸುವುದೋ
ಅದೇ ಶಿವನ ನೈವೇದ್ಯಕ್ಕೆ ಯೋಗ್ಯವಾದದ್ದು, ಸಲ್ಲತಕ್ಕದ್ದು.

* * *

ಲಲ್ಲೇಶ್ವರಿ ಶ್ರೀ ಸಿದ್ಧನಾಥನ ಶಿಷ್ಯಳು—ಲಲ್ಲೇಶ್ವರಿ ಶ್ರೀ ಸಿದ್ಧನಾಥನನ್ನು ನಾಲ್ಕು ಪ್ರಶ್ನೆಗಳನ್ನು ಕೇಳುತ್ತಾಳೆ—

ಪ್ರಶ್ನೆ :—ನಿದ್ದೆಯಲ್ಲಿ ಮುಳುಗಿರುವವನಾರು ಎಚ್ಚತ್ತಿರುವವನಾರು?

ಉತ್ತರ :—ಮನಸ್ಸು (ಆಲೋಚನಾಶಕ್ತಿ) ಪ್ರಪಂಚ ವ್ಯವಹಾರದಲ್ಲಿಯೇ ಮುಳುಗಿ ಮಸಕಾಗಿರುವುದೇ ನಿದ್ದೆ. ಮನಸ್ಸು ಪರಮಾತ್ಮ ಜ್ಞಾನದಲ್ಲಿ ಮಗ್ನವಾಗಿರುವುದೇ ಎಚ್ಚರ.

ಪ್ರಶ್ನೆ :—ಸದಾ ಸ್ರವಿಸುವ ಸರೋವರ ಯಾವುದು?

ಉತ್ತರ :—ಕರ್ಮೇಂದ್ರಿಯಗಳು (ವಾಕ್ ಪಾಣಿಪಾದ ಪಾಯು ಉಪಸ್ಥಾ) ಯೋಗಿಯಾದವನು ಇವುಗಳನ್ನು ಗೆದ್ದು ಮನಸ್ಸನ್ನು ಸಾಕ್ಷಾತ್ಕಾರದ ಕಡೆಗೆ ಹೊರಳುವಂತೆ ಎಚ್ಚರಗೊಳಿಸುತ್ತಾನೆ.

ಪ್ರಶ್ನೆ :—ಮಾನವನು ಶಿವನಿಗೆ ಯಾವುದನ್ನು ಅರ್ಪಿಸಬೇಕು ?

ಉತ್ತರ :—ಜೀವಾತ್ಮನು ಪರಮಾತ್ಮನಲ್ಲಿ ಐಕ್ಯಹೊಂದುವ ಜ್ಞಾನವೇ ಶಿವಾರ್ಪಣೆಗೆ ಯೋಗ್ಯವಾದದ್ದು.

ಪ್ರಶ್ನೆ :—ನೀನು ಕೊನೆಗೆ ಸೇರಬೇಕೆಂದಿರುವ ಅತ್ಯುನ್ನತ ಸ್ಥಾನ ಯಾವುದು ?

ಉತ್ತರ :—ಪರಮಪದ—ಶಿವತತ್ತ್ವ

ತತ್ತ್ವದೃಷ್ಟಿಯಿಂದ ವಿಮರ್ಶಿಸಿದರೆ ಈ ಜೀವಾತ್ಮನಿಗೆ ಯಾವ ವಿಧವಾದ ಬಂಧನವೂ ಇವನ ಸ್ವಭಾವಕ್ಕೆ ಸೇರಿದ್ದಲ್ಲ. ಜನನ ಮರಣ, ಕಷ್ಟ ಸುಖ, ಇವುಗಳೆಲ್ಲಾ ಇವನ ಸಂಸಾರ ಯಾತ್ರೆಯಲ್ಲಿ ಉಂಟಾಗುವ ಘಟನೆಗಳು. ಇವನ ಗುರಿ ಪರಬ್ರಹ್ಮಪ್ರಾಪ್ತಿ.

## ೬. ಲಲ್ಲಯೋಗೀಶ್ವರಿ ವಾಕ್ಯಗಳ ಸಾರಾಂಶ

ನಮ್ಮ ದೇಶದ ಎಲ್ಲಾ ಅನುಭಾವಿಗಳ ಉಪದೇಶ ವಾಕ್ಯಗಳಿದ್ದಂತೆ ಈ ಕಾಶ್ಮೀರದ ಲಲ್ಲೇಶ್ವರಿ ಎಂಬ ಸಿದ್ಧ ಮಹಿಳೆಯ ಉಪದೇಶಗಳು ಕೂಡ ವಿಸ್ತಾರವಾಗಿ ಪ್ರಚಾರದಲ್ಲಿವೆ. ಅವುಗಳ ಸಾರಾಂಶವನ್ನು ಕನ್ನಡದಲ್ಲಿ ತಿಳಿಯಪಡಿಸಬೇಕೆಂಬ ಉದ್ದೇಶದಿಂದ ಈ ಪ್ರಯತ್ನವನ್ನು ಮಾಡಲಾಗಿದೆ. ಮುಖ್ಯವಾಗಿ ಈಕೆಯ ಸಾಧನ ಮತ್ತು ಸಿದ್ಧಿ ಈ ಎರಡು ಅಂಶಗಳನ್ನು ಇಲ್ಲಿ ನಾವು ಗಮನಿಸತಕ್ಕದ್ದಾಗಿದೆ. ಸಾಧನೆಯ ಸ್ವರೂಪವನ್ನು ತಿಳಿಯಬೇಕಾದರೆ ಅದರ ಹಂತದ ತಿಳಿವಳಿಕೆಯೂ ನಮಗೆ ಬೇಕಾಗುತ್ತದೆ. ಆದುದರಿಂದ ಸಂಗ್ರಹವಾಗಿ ಆಕೆ ಅನುಸರಿಸಿದ ಸಾಧನ ಮಾರ್ಗಗಳ ಸ್ವರೂಪವನ್ನು ವಿವೇಚಿಸಿರುವುದಾಗಿದೆ.

### ೧. ಜಿಜ್ಞಾಸೆ

ಸಾಧಕರಿಗೆ ತತ್ತ್ವ ವಿಷಯದಲ್ಲಿ ಜಿಜ್ಞಾಸೆಯುಂಟಾಗುವುದು ಸಹಜ. ಒಂದು ವಿಷಯ ಸ್ವಲ್ಪ ತಿಳಿದು ಸ್ವಲ್ಪ ತಿಳಿಯದಿದ್ದರೆ ಅದನ್ನು ಪೂರ್ಣವಾಗಿ ತಿಳಿಯಬೇಕೆಂಬ ಇಚ್ಛೆಯುಂಟಾಗುತ್ತದೆ. ತಿಳಿಯದೆ ಇರುವ ವಿಷಯವನ್ನು ತಿಳಿಯಬೇಕೆಂಬ ಆಸೆಯೂ ಇರುತ್ತದೆ. ಇದನ್ನೇ ಜಿಜ್ಞಾಸೆ ಎಂದು ಪಾರಿಭಾಷಿಕವಾಗಿ ಕರೆಯುವುದು. ಜೀವನದ ಎಲ್ಲಾ ಪ್ರವೃತ್ತಿಗಳೂ ಈ ಜಿಜ್ಞಾಸೆಯ ಬಲದಿಂದಲೇ ನಡೆಯುತ್ತವೆ. ವ್ಯವಹಾರ ವಿಷಯವಾಗಲಿ ತತ್ತ್ವವಿಷಯವಾಗಲಿ ಈ ಜಿಜ್ಞಾಸೆಯಿಂದಲೇ ಮಾನವನ ತಿಳಿವಳಿಕೆಗೆ ಬರುವುದು. ಇದು ಸಾಮಾನ್ಯ ನಿಯಮ. ಸಾಧಕರ ಜಿಜ್ಞಾಸೆ ವ್ಯವಹಾರ ಜಿಜ್ಞಾಸೆಗಿಂತ ವಿಲಕ್ಷಣವಾಗಿರುತ್ತದೆ. "ನಾನು ಎಲ್ಲಿಂದ ಬಂದೆ, ಎಲ್ಲಿಗೆ ಹೋಗಬೇಕು, ಹೋಗುವ ದಾರಿ ನನಗೆ ತಿಳಿಯದು. ನಾನು ಸುಖದುಃಖಗಳನ್ನನುಭವಿಸುತ್ತೇನೆ. ಇವುಗಳ ವ್ಯವಸ್ಥೆ ಹೇಗೆ ಎಂಬುದನ್ನು ತಿಳಿಯಬೇಕೆಂಬ ಆಸೆ ನನಗಿದೆ." ಈ ಬಗೆಯ ಜಿಜ್ಞಾಸೆಯುಂಟಾದಾಗ ತನ್ನ ಸ್ವಶಕ್ತಿಯಿಂದ ತಿಳಿದು ಗುರಿಯನ್ನು ಮುಟ್ಟಲು ಸಮರ್ಥವಲ್ಲವೆಂದು ಮನವರಿಕೆಯಾದಾಗ ಈಶ್ವರನಿಗೆ

ಶರಣು ಹೋಗುತ್ತಾಳೆ, ಪ್ರಭುವೆ, ನೀನು ನನಗೆ ತಿಳಿಯಲಿಲ್ಲ. ಕೆಲವರು ಜೀವಾತ್ಮನೂ ಈಶ್ವರನೂ ಒಂದೇ ಎನ್ನುತ್ತಾರೆ, ಕೆಲವರು ಇವರಿಬ್ಬರೂ ಬೇರೆ ಬೇರೆ ಎನ್ನುತ್ತಾರೆ. ಇದಲ್ಲದೆ ಶಿವ ಕೇಶವ ಜಿನ ಬ್ರಹ್ಮ ಮೊದಲಾದ ಹೆಸರುಗಳಿಂದ ಆ ಪರತತ್ತ್ವವನ್ನು ಕರೆಯುತ್ತಾರೆ. ಇಲ್ಲಿಯೂ ಕೂಡ ಇದೇ ಸರಿ ಎಂದು ಹೇಳುವ ಶಕ್ತಿ ನನಗಿಲ್ಲ ಎನ್ನುವ ಭಾವನೆಯುಂಟಾಗಿ ಅಹಂಕಾರದ ದುಷ್ಪರಿಣಾಮಗಳೆಲ್ಲ ಬಿಟ್ಟು ಹೋಗುತ್ತವೆಂಬ ಭಾವವನ್ನು ವ್ಯಕ್ತಪಡಿಸಿದ್ದಾಳೆ. ಆಗ ಈ ತತ್ತ್ವ ವಿಚಾರವನ್ನು ಯಾರು ವ್ಯಕ್ತ ಪಡಿಸುವರೋ, ಯಾರು ನಮ್ಮಲ್ಲಿ ಕಾಣುವ ವ್ಯತ್ಯಾಸಗಳನ್ನು ಏರಿಳಿತ ಗಳನ್ನೂ ಪರಿಶೀಲಿಸಿ ನನಗೆ ಜ್ಞಾನ ವಿಕಾಸವನ್ನುಂಟು ಮಾಡುವರೋ ಅವರೇ ಗುರುಗಳು ಎನ್ನುತ್ತಾಳೆ. ಹಾಗೆಯೇ ಪ್ರಪಂಚ ವಿಷಯದಲ್ಲಿಯೂ ಜಿಜ್ಞಾಸೆಯು ಇವಳ ಮನಸ್ಸನ್ನು ಕದಡುತ್ತದೆ. ಇಂದು ಬಾಲ್ಯ, ಕೆಲವು ಕಾಲದಲ್ಲಿ ಯೌವನ, ಹಾಗೆಯೇ ಮುಪ್ಪು, ಕೊನೆಗೆ ಶರೀರವನ್ನು ಬಿಡಬೇಕು. ಇಲ್ಲಿ ಶಾಶ್ವತವಾದದ್ದು ಯಾವುದೂ ಇಲ್ಲ ಎಂಬ ವಿಮರ್ಶನೆ ಯುಂಟಾಗಿ ಶಾಶ್ವತವಾದದ್ದು ಪರತತ್ತ್ವ ಒಂದೇ, ಮಿಕ್ಕದ್ದೆಲ್ಲ ಕೆಲವು ಕಾಲ ಇರತಕ್ಕದ್ದು, ಪ್ರಾಪಂಚಿಕ ವಿಷಯಗಳಲ್ಲಿ ಹೆಚ್ಚು ಕಾಲ ತಿರುಗಿದ್ದೇನೆ, ಆದರೂ ಸತ್ಯವನ್ನು ನಾನು ಅರಿಯಲಿಲ್ಲ. ತೀರ್ಥ ಕ್ಷೇತ್ರ ಗಳಿಗೆ ಹೋದೆ. ಅಲ್ಲಿಯೂ ಸಾಕ್ಷಾತ್ಕಾರವೇರ್ಪಡಲಿಲ್ಲ. ಪರಮಾತ್ಮನ ಗುಣಗಾನವನ್ನು ಮಾಡಿದ್ದಾಯಿತು. ಅದರಿಂದಲೂ ಸಾಕಾದಷ್ಟು ಪ್ರಯೋಜನ ಸಿಕ್ಕಲಿಲ್ಲ. ಇನ್ನು ಮುಂದೆ ಏನು? ಹೊರಗೆ ಹುಡುಕುವು ದಕ್ಕಿಂತ ನಮ್ಮಲ್ಲಿಯೇ ಇರುವ ಪರಮಾತ್ಮನನ್ನು ಧ್ಯಾನಿಸಬೇಕು. ನಮ್ಮಲ್ಲಿಯೇ ನಾವು ಸರ್ವವ್ಯಾಪಿಯಾದ ಪರಮಾತ್ಮನನ್ನು ಮನಗಂಡರೆ ಸಾಕ್ಷಾತ್ಕಾರವುಂಟಾಗಲು ತೊಂದರೆಯಿಲ್ಲ ಎಂಬ ಅಂಶ ಅರಿವು ಉಂಟಾಗುವುದು.

## ೨. ವಿಮರ್ಶೆ

ಜಿಜ್ಞಾಸೆಯು ವಿಮರ್ಶನ ಶಕ್ತಿಯಾಗಿ ಪರಿಣಮಿಸಿದರೆ ನಮ್ಮ ಜೀವನದ ಅನೇಕ ಮುಖಗಳ ಅರಿವು ಉಂಟಾಗುತ್ತದೆ. ಇದರಿಂದ ಯಾವಾ

ಗಲೂ ಬದಲಾವಣೆಯನ್ನು ಪಡೆಯುತ್ತಿರುವ ಪ್ರಪಂಚದ ಅನಿತ್ಯತ್ವವು ಗೋಚರಿಸುತ್ತದೆ. ಜಿಜ್ಞಾಸೆ, ವಿಮರ್ಶೆ ಈ ಎರಡು ಮುಖಗಳೂ ಸ್ಥಿರ ಪಟ್ಟರೆ ನಮ್ಮ ಭಾವನಾ ಪ್ರಪಂಚದಲ್ಲಿ ಸ್ವಾಭಿಮಾನಕ್ಕೆ ಅವಕಾಶವಿಲ್ಲ. ಅಹಂಕಾರಕ್ಕೆ ಎಡೆಯಿಲ್ಲ. ಈ ಸ್ಥಿತಿಯಲ್ಲಿ ತತ್ತ್ವಜ್ಞಾನಿಯಾದ ಗುರುವೆ ಉಪಾಯ. ಅಂದರೆ ಪರತತ್ತ್ವವಾಗಿರುವ ಪರಶಿವನೇ ಈ ಉಪಾಯ ದಿಂದ ಪಡೆಯತಕ್ಕವನು (ಉಪೇಯ). ಹೀಗೆ ಸ್ವಾಭಿಮಾನ ಅಹಂಕಾರ ಗಳನ್ನು ಬಿಟ್ಟ ನಂತರ ಪರಮಾತ್ಮನಲ್ಲಿ ಶರಣು ಹೋಗುವನು. ಆ ಪರ ಮಾತ್ಮನೇ ಈ ಸಾಧಕನಿಗೆ ಇವನ ಯೋಗ್ಯತಾನುಸಾರವಾಗಿ ಪಂಡಿತ ನಾಗಲಿ ಪಾಮರನಾಗಲಿ, ಸ್ತ್ರೀಯಾಗಲಿ ಪುರುಷನಾಗಲಿ ಇವರ ಜ್ಞಾನ ವಿಕಾಸಕ್ಕೆ ಪ್ರೇರಕನಾಗುತ್ತಾನೆ. ಅಲ್ಲಿಂದ ಮುಂದುವರಿಯುವ ಪ್ರಯತ್ನ ಗಳೆಲ್ಲಾ ಆ ಪರತತ್ತ್ವದ ಪ್ರೇರಣೆಗನುಸಾರವಾಗಿರುತ್ತವೆ. ಇದು ನಿಜ ವಾದ ಸಾಧಕನ ಸಾಧನೆಯಲ್ಲಿ ಮೊದಲನೆಯ ಹಂತ.

### ೩. ಶಾಸ್ತ್ರಜ್ಞಾನ ಮತ್ತು ಸ್ವಾತ್ಮ ವಿಮರ್ಶೆ

ಸಾಧನೆಯನ್ನು ಮುಂದುವರಿಸಿದರೆ ಅದರ ಭೇದಗಳನ್ನು ಮೊದಲೇ ಹೇಳಲಾಗುವುದಿಲ್ಲ. ಕೆಲವು ಸಮಯಗಳಲ್ಲಿ ಶಾರೀರಕವಾದ ಕ್ರಿಯೆಗಳು ಮುಖ್ಯವಾಗಿರಬಹುದು. ಅವು ಆರೋಗ್ಯವನ್ನೂ ಮನಶ್ಶಾಂತಿಯನ್ನೂ ಸ್ಥಿರಪಡಿಸುತ್ತವೆ. ಪೂಜೆ, ಭಜನೆ, ನಾಮ ಸಂಕೀರ್ತನೆ, ಪಾರಾಯಣ, ಉತ್ಸವಗಳು ಕೆಲವರಿಗೆ ಹಿತವಾಗಿರುತ್ತವೆ. ಅದರಿಂದ ಅಪ್ರತ್ಯಕ್ಷವಾಗಿ ಪರಿಪಾಕವೇರ್ಪಡಬಹುದು. ಇನ್ನು ತೀವ್ರವಾದ ಅಧಿಕಾರಿಗಳು ಧ್ಯಾನ ಧಾರಣ ಮೊದಲಾದ ನಿಶ್ಚಿತವಾದ ಸಾಧನೆಗಳನ್ನು ಮಾಡುತ್ತಾರೆ. ಅವು ಗಳಿಂದ ಕೆಲವು ನಿರ್ದಿಷ್ಟವಾದಂತಹ ಪರಿವರ್ತನಗಳುಂಟಾಗುತ್ತವೆ. ಇನ್ನೂ ಅನೇಕ ಸಾಧನೆಗಳು ಹಿಂದಿನಿಂದಲೂ ಬಂದಿವೆ. ಸಾಧಕನು ಸಂಪ್ರ ದಾಯದಂತೆ ಸನ್ಯಾಸಿಯಾಗಲಿ ಗೃಹಸ್ಥನಾಗಲಿ, ಏಕಾಂಗಿಯಾಗಿರಲಿ ಅಥವಾ ಸಮುದಾಯದಲ್ಲಿರಲಿ ಈ ಸಾಧನಾಭ್ಯಾಸಗಳಲ್ಲಿ ತೊಡಗದೆ ಸಿದ್ಧಿ ಯನ್ನು ಪಡೆಯುವುದು ಸಾಧ್ಯವಿಲ್ಲ. ಸಾಧಕನಿಗೆ ಹಿಂದಿನ ಸಂಸ್ಕಾರಗಳು ಕರಗಿ ಹೋಗಬೇಕು. ಗ್ರಾಹಕನಾಗಿರುವ ಜೀವಾತ್ಮನಿಗೂ ತಿಳಿವಳಿಕೆಗೆ

ಗೋಚರಿಸುವ ಅಥವಾ ಗ್ರಾಹ್ಯವಾಗಿರುವ ಪ್ರಪಂಚಕ್ಕೂ ಇರುವ ಸಂಬಂಧವು ಅರ್ಥವಾಗಬೇಕು. ಭಿನ್ನವಾಗಿಯೂ ಅಭಿನ್ನವಾಗಿಯೂ ಇರುವ ಈ ವಿಶ್ವವನ್ನು ಸಾಧಕನು ತನ್ನ ಭಾವನಾಬಲದಿಂದ ಅರಿಯ ಬೇಕು. ಅರಿಯುವಶಕ್ತಿಯುಳ್ಳ ಗ್ರಾಹಕನು ತಾನು ಸಂಕುಚಿತ ಸ್ಥಿತಿಯಲ್ಲಿ ದ್ದರೂ ಅನಂತವಾದ ವಿಕಾಸವನ್ನು ಪಡೆಯಬಹುದೆಂಬ ಧೃಢನಿಶ್ಚಯ ಮತ್ತು ಧೈರ್ಯವುಂಟಾಗಬೇಕು. ಇದರಿಂದ ತಾನು ಸ್ವಯಂಪ್ರಕಾಶನಾಗಿ ಜ್ಞಾನರೂಪಿಯಾಗಿರುವ ಪರಮಾತ್ಮನಂತೆಯೇ ಇದ್ದೇನೆಂಬ ಭಾವನೆ ಸ್ಥಿರವಾಗಿ ನಿಂತರೆ ಸಾಧಕನಿಗೆ ಕಾಮ ಕ್ರೋಧಗಳು ಮದ ಮಾತ್ಸರ್ಯ ಗಳು ಶಮನವಾಗುತ್ತವೆ. ಶಾಸ್ತ್ರದ ವಿವರಣೆಗಳಿಂದ ಉಂಟಾದ ತಿಳಿ ವಳಿಕೆಯು ಈ ಸ್ಥಿತಿಯಲ್ಲಿ ಅನುಭವಕ್ಕೆ ಬರುತ್ತದೆ. ಹಾಗೆಯೇ ಜನನ ಮರಣಗಳಿಂದ ತಾನು ಸುತ್ತುತ್ತಲಿರುವೆನೆಂದು ಮನವರಿಕೆಯಾಗುತ್ತದೆ. ಇಂತಹ ಎಲ್ಲಾ ವಿಷಯಗಳೂ ಸಾಧಕನ ಮನಸ್ಸಿಗೆ ಬರುತ್ತವೆ. ಆದರೆ ವಿಷಯವು ಅನುಭವ ಮಟ್ಟಕ್ಕೇರಿದಾಗ ಅದರ ಪ್ರಭಾವವು ವಿಲಕ್ಷಣ ವಾಗಿರುತ್ತದೆ. ವಿಶ್ವ ವ್ಯಾಪಾರಗಳೆಲ್ಲ ಪರಮಾತ್ಮನ ಶಕ್ತಿಯಿಂದ ನಡೆ ಯುತ್ತಲಿವೆಯೆಂಬ ತತ್ತ್ವವು ಈತನಿಗೆ ಅನುಭವಕ್ಕೆ ಬರುತ್ತದೆ. ಆ ಸ್ಥಿತಿ ಯಲ್ಲಿ ಈತನು ಮುಖ್ಯವಾಗಿ ಒಳಗಿನ ಪ್ರಪಂಚಕ್ಕೂ ಹೊರಗಿನ ಪ್ರಪಂಚಕ್ಕೂ ಇರುವ ವ್ಯತ್ಯಾಸಗಳನ್ನೂ ಸಂಬಂಧಗಳನ್ನೂ ಮನಗಾಣು ವನು. ಇದರಿಂದ ವಿಶ್ವದ ಸ್ವರೂಪಜ್ಞಾನ, ತನ್ನ ಸಂಕುಚಿತವಾಗಿರುವ ಸ್ಥಿತಿ, ಜೀವನದಲ್ಲಿ ಪರಾಧೀನತೆ ಎಷ್ಟಿದೆ ಎನ್ನುವ ತಿಳಿವಳಿಕೆ–ಇವು ಖಚಿತ ವಾಗಿ ಅನುಭವಕ್ಕೆ ಬರುತ್ತವೆ. ಗ್ರಾಹ್ಯ ಗ್ರಾಹಕ ವಿಭಾಗದ ಅನುಭವ ಬಂದ ಹಾಗಾಯಿತು. ಎಷ್ಟರಮಟ್ಟಿಗೆ ತಾನು ಜ್ಞಾನ ವಿಕಾಸವನ್ನು ಪಡೆಯುವುದಕ್ಕೆ ಸಮರ್ಥನಾಗಿರುವೆನೆಂಬ ನಂಬಿಕೆ, ಅದಕ್ಕೆ ಅಡಚಣೆ ಯನ್ನುಂಟುಮಾಡುವ ಕಾಮ ಕ್ರೋಧವೇ ಮೊದಲಾದ ಶಕ್ತಿಗಳು ಪ್ರಕೃತಿಯ ವಿಲಾಸವೆಂದು ತನ್ನ ಸ್ವರೂಪಕ್ಕೆ ಸೇರಿಲ್ಲವೆಂಬ ವಿಭಜನೆ ಯುಂಟಾಗುತ್ತದೆ. ಹಾಗೆಯೇ ತನ್ನ ಪರಾಧೀನತೆಯು ಈಶ್ವರನ ಸೃಷ್ಟಿವಿಲಾಸದ ಒಂದು ಅಂಶವೆಂಬ ಅರಿವುಂಟಾಗುತ್ತದೆ. ಈ ಎರಡು ಹಂತಗಳಲ್ಲಿ ಮುಂದುವರಿದ ಸಾಧಕನು ಮುಂದಿನ ತನ್ನ ಸ್ವಸ್ವರೂಪ ಸಾಕ್ಷಾತ್ಕಾರಕ್ಕೆ ಅರ್ಹನಾಗುತ್ತಾನೆ.

## ೪. ಅಭ್ಯಾಸ-ಸ್ವರೂಪಾನುಸಂಧಾನ

ಇದುವರೆಗೂ ಸೂಚಿಸಿದ ಕೆಲವು ಅಂಶಗಳು ರೂಢ ಮೂಲವಾದರೆ ಸಾಧಕನು ಆಂತರೀಯ ಪರಿವರ್ತನೆಗೆ ಅರ್ಹನಾಗಿ ಅಭ್ಯಾಸಯೋಗ ವನ್ನು ಮುಂದುವರಿಸುತ್ತಾನೆ. ಸ್ಥೂಲವಾದ ಜಡ ಪ್ರಪಂಚ ಅದರ ವಿಕಾರಗಳು ಅದರ ಬದಲಾವಣೆಗಳು ಇವುಗಳು ಒಂದು ಬಗೆಯಾಗಿರು ತ್ತವೆ. ಒಳಗೆ ಕಾಮಕ್ರೋಧಗಳು ದ್ವೇಷಾಸೂಯೆಗಳೇ ಮೊದಲಾದ ಅಶಾಂತಿಗೂ ಪ್ರವೃತ್ತಿಗೂ ಕಾರಣಗಳಾಗಿರುವವುಗಳು ಇನ್ನೊಂದು ಬಗೆ ಯಾಗಿರುತ್ತವೆ. ಈ ಅಭ್ಯಾಸದಲ್ಲಿ ಜಡ ಪ್ರಪಂಚದ ವಿಸ್ತಾರವನ್ನೂ ಕಾಮ ಕ್ರೋಧ ಮೊದಲಾದ ಪ್ರೇರಣಾ ಶಕ್ತಿಗಳನ್ನೂ ಅರಿಯಲು ಸಮರ್ಥನಾಗುತ್ತಾನೆ. ತಾನು ಇವುಗಳಲ್ಲಿಯೇ ಸೇರಿಕೊಂಡಿದ್ದರೂ ತಾನು ಇವುಗಳಿಂದ ಬೇರ್ಪಟ್ಟವನೆಂಬ ಶುದ್ಧವಾದ ತಿಳಿವಳಿಕೆಯಿಂದ "ತಾನು" ಎಂಬ ಜೀವತತ್ತ್ವವು ಬೇರೆಯಾಗಿದೆಯೆಂಬ ಅನುಭವ ವುಂಟಾಗುತ್ತದೆ. ಈ ಭೇದಗಳು ಅಸಂಕೀರ್ಣವಾಗಿ ತಿಳಿಯಾಗಿ ಅನುಭವಕ್ಕೆ ಬಂದಾಗ ಈ ಜೀವಾತ್ಮನನ್ನು ಶಾಸ್ತ್ರಕಾರರು ನಿರಾಮಯ, ಚಿದಾನಂದ, ಜ್ಞಾನರೂಪ ಮೊದಲಾದ ಪದಗಳಿಂದ ಸೂಚಿಸಿರುತ್ತಾರೆ. ಈ ಸ್ಥಿತಿಯಲ್ಲಿ ಆಶ್ರಯ ಯಾರು ಎಂದರೆ ಸರ್ವವ್ಯಾಪಿಯಾಗಿರುವ ಆ ಪರಮೇಶ್ವರನೇ–ಎಂದು ಮನವರಿಕೆಯಾಗಬೇಕು. ಆಗ ಜಡ ಪ್ರಪಂಚವು ಇವನನ್ನು ಬಂಧಿಸಲಾರದು. ಕಾಮಕ್ರೋಧಾದಿ ಜಾಡ್ಯಗಳು ಇವನನ್ನು ಅಂಟಲಾರವು. ಎಲ್ಲಾ ತಿಳಿದಿದ್ದರೂ ಶಾಂತನಾಗಿರುವನು. ಎಲ್ಲವನ್ನೂ ಕೇಳುತ್ತಲಿದ್ದರೂ ನೋಡುತ್ತಲಿದ್ದರೂ ತತ್ತ್ವದಲ್ಲಿಯೇ ದೃಷ್ಟಿಯುಳ್ಳವ ನಾಗಿರುತ್ತಾನೆ. ಸೂರ್ಯನ ಕಿರಣಗಳು ಎಲ್ಲಾ ಪದಾರ್ಥಗಳ ಮೇಲೂ ಪಸರಿಸುವಂತೆ ಈತನ ಅನುಭವ ಎಲ್ಲಾ ವಿಷಯಗಳಲ್ಲಿಯೂ ಒಂದೇ ರೀತಿಯಾಗಿರುತ್ತದೆ. ಬಾಹ್ಯ ಜೀವನ ಇತರರಂತೆ ಇದ್ದರೂ ಈತನ ಕರ್ಮಾಚರಣೆ ಮನೋಭಾವನೆಗಳು ತೀರಾ ಭಿನ್ನವಾಗಿರುತ್ತವೆ. ಆಹಾರ ವ್ಯವಹಾರಗಳು ಬದುಕಿರುವವರೆಗೂ ಎಲ್ಲರಿಗೂ ಸಮಾನ ವಾಗಿಯೇ ಇರುತ್ತವೆ. ಇಂತಹ ಸ್ವರೂಪಾನು ಸಂಧಾನವನ್ನು ಮಾಡುವುದಕ್ಕೆ ಈ ಸಾಧಕನು ಸಮರ್ಥನಾದಾಗ ಅಂತರ್ಯಾಮಿ

ಯಾಗಿರುವ ಪರಮಾತ್ಮನ ಅನುಭವವುಂಟಾಗುತ್ತದೆ ಹಾಲಿನಲ್ಲಿ ಬೆಣ್ಣೆ ಎಳ್ಳಿನಲ್ಲಿ ಎಣ್ಣೆ ಇರುವಂತೆ ಆ ಪರತತ್ತ್ವವು ಸರ್ವವ್ಯಾಪಿಯಾಗಿರುವು ದೆಂಬುದನ್ನು ಇಲ್ಲಿ ಸಾಧಕನು ಸಾಧಿಸುತ್ತಾನೆ.

## ೫. ಅನುಭವೋದಯ

ಶಾಸ್ತ್ರಾಭ್ಯಾಸದಿಂದ ತಿಳಿವಳಿಕೆಯುಂಟಾಗಿದ್ದರೂ ಅನುಭವಕ್ಕೆ ಅದು ಒಡನೆಯೇ ಬರುವುದಿಲ್ಲ. ಅದು ಅನುಭವ ಭೂಮಿಯನ್ನು ಮುಟ್ಟದಿದ್ದರೆ ವಾಜ್ಞ್ಮಾತ್ರದಲ್ಲಿ ಪರರಿಗೆ ಉಪದೇಶ ಮಾಡುವುದರಲ್ಲಿ ಕೊನೆಗೊಳ್ಳುತ್ತದೆ. ಮನೆಯಲ್ಲಿರಲಿ ಕಾಡಿನಲ್ಲಿರಲಿ ಬೇರೆ ಯಾವ ಆಶ್ರಮದಲ್ಲಿರಲಿ ಎಡಬಿಡದ ಸ್ವರೂಪಾನುಸಂಧಾನವಿಲ್ಲದೆ ನಮ್ಮ ಚಾಂಚಲ್ಯಕ್ಕೂ ಮತ್ತು ಸಂಕೋಚಕ್ಕೂ ಕಾರಣವಾಗಿರುವ ಅಂತಃ ಶಕ್ತಿಗಳು ಲಯವನ್ನು ಹೊಂದುವುದಿಲ್ಲ. ಈ ಸ್ಥಿತಿಯು ಸ್ವಚ್ಛವಾಗಿ ಅನುಭವಕ್ಕೆ ಬಂದಿದ್ದರೆ ಯಾರು ಬೈದರೂ ಕೋಪವುಂಟಾಗುವುದಿಲ್ಲ. ಯಾರು ತನ್ನನ್ನು ಹೀಯಾಳಿಸಿದರೂ ತನಗೆ ಅಶಾಂತಿಯುಂಟಾಗುವು ದಿಲ್ಲ. ತೆಗಳಲಿ, ಹೊಗಳಲಿ ಪೂಜೆ ಮಾಡಲಿ, ವಿಶುದ್ಧ ಜ್ಞಾನವನ್ನು ಪಡೆದಿರುವ ವ್ಯಕ್ತಿಯು ಹಿಗ್ಗುವುದೂ ಇಲ್ಲ ಕುಗ್ಗುವುದೂ ಇಲ್ಲ. ಇಂತಹ ಸಾಧಕನು ತನ್ನ ಮನಸ್ಸಿನಿಂದ ನೋಡುವುದೆಲ್ಲಾ ಪರತತ್ತ್ವವೇ ಆಗಿರುತ್ತದೆ. ಜ್ಞಾನೇಂದ್ರಿಯಗಳಿಂದ ತಿಳಿಯುವ ಪ್ರಪಂಚವನ್ನು ಪರಮಾತ್ಮನ ವಿಲಾಸವೆಂದು ಅರಿಯುವನು. ಈ ಕಾರಣಗಳಿಂದಲೇ ನಮ್ಮಲ್ಲಿ ಶಾಸ್ತ್ರ ಸಂಪ್ರದಾಯಗಳ ಪ್ರವಚನಗಳಿಗಿಂತ ಅನುಭವಿಗಳ ಉಪದೇಶ ವಚನಗಳನ್ನು ಕೇಳುವ ರೂಢಿ ಬಂದಿದೆ. ಆದರೆ ಈ ಅನುಭವ ಕೆಲವರಿಗಾದರೂ ಸಾಧ್ಯವೆ ಎಂಬುದು ಮಾತುಗಳಿಂದಲೇ ಪರಿಹಾರ ವಾಗುವುದಿಲ್ಲವೆಂಬುದನ್ನು ತಿಳಿದು ಸಾಧಕನು ಸಾಧನ ಮಾರ್ಗವನ್ನನು ಸರಿಸುತ್ತಾನೆ.

## ೬. ಸಿದ್ಧಾವಸ್ಥೆ

ಸಾಮಾನ್ಯಸ್ಥಿತಿಯನ್ನು ಮೀರಿ ತತ್ತ್ವವಿಚಾರವನ್ನು ಮಾಡಿ ಶಾಸ್ತ್ರ

ಜ್ಞಾನವನ್ನು ಪಡೆದು—ಮನಸ್ಸಿನಿಂದ ನಿಶ್ಚಯಿಸಿದ ಅರ್ಥವನ್ನು ಅನುಭವರೂಢವಾಗಿ ಮಾಡಿಕೊಂಡು ತನ್ನ ಯೋಗ್ಯತೆಗನುಸಾರವಾದ ಸಾಧನವನ್ನನುಸರಿಸಿ ಅಭ್ಯಾಸದ ಪರಿಪಾಕದಿಂದ ಈ ಶರೀರವಿರುವಾಗಲೇ ಅಲೌಕಿಕ ಅನುಭವಗಳನ್ನು ಪಡೆಯುತ್ತಾ ಸಮಾಧಿ ಸ್ಥಿತಿಯಲ್ಲಿ ಬ್ರಹ್ಮಾನುಭವವನ್ನು ಪಡೆಯುವುದೇ ಸಿದ್ಧಿ. ಹೀಗೆ ಸ್ವರೂಪ ಜ್ಞಾನ ಉಂಟಾದನಂತರ ನಾನು ನೀನು ಎಂಬ ಭೇದಗಳು ಅಳಿಯುತ್ತವೆ. ಮನೋವೃತ್ತಿಗಳು ದೂರವಾಗುವುವು. ಯಾವ ಮನಸ್ಸು ಇಂದ್ರಿಯ ಶರೀರ ಪ್ರಾಣಬುದ್ಧಿಗಳ ಪ್ರೇರಣೆಯಂತೆ ನಡೆಯುತ್ತಲಿದ್ದನೋ ಆ ಇಂದ್ರಿಯಗಳೆಲ್ಲಾ ಇವನು ಹೇಳಿದಹಾಗೆ ನಡೆಯುತ್ತವೆ. ಸಿದ್ಧತಿ ಸಕ್ರಮವಾಗಿ ವಿಶದವಾಗಿ ಏರ್ಪಟ್ಟಲ್ಲಿ ಸಮಾಧಿಲಾಭವೇರ್ಪಡುವುದು. ಈ ಸಮಾಧಿಲಾಭವೇ ಬೋಧಮಯನಾದ ಚಿದ್ರೂಪಿಯಾದ ಶಿವನ ಸಾಕ್ಷಾತ್ಕಾರ—ಸಾಕ್ಷಾತ್ಕಾರವನ್ನು ಹೊಂದಿದವನು ಪರತತ್ತ್ವಾನು ಸಂಧಾನದಲ್ಲಿ ಮಗ್ನನಾಗಿ ಆನಂದಾನುಭವದಲ್ಲಿರುತ್ತಾನೆ.

ಮೊದಲನೆ ಹಂತದಲ್ಲಿ ಜಿಜ್ಞಾಸೆ ಎರಡನೆ ಹಂತದಲ್ಲಿ ಶಾಸ್ತ್ರಜ್ಞಾನ ಮತ್ತು ಸ್ವಾತ್ಮವಿಮರ್ಶೆ ಮೂರನೆಯ ಹಂತದಲ್ಲಿ ಅಭ್ಯಾಸ ಮತ್ತು ಆಂತರ್ಯಶಕ್ತಿಗಳ ಅನುಸಂಧಾನ, ನಾಲ್ಕನೆಯದರಲ್ಲಿ ಅನುಭವೋದಯ ಐದನೆಯದರಲ್ಲಿ ಸಿದ್ಧಾವಸ್ಥೆ—ಹೀಗೆ ನಮ್ಮ ತಿಳಿವಳಿಕೆಗೆ ಐದು ವಿಭಾಗ ಗಳನ್ನು ಮಾಡಿಕೊಂಡರೆ ಅನುಭವಿಗಳ ದೃಷ್ಟಾಂತಗಳು ನಮಗೆ ಸ್ವಲ್ಪ ತಿಳಿಯಾಗಿ ತಿಳಿಯುತ್ತವೆ. ಅವರ ಉಪದೇಶ ವಚನಗಳು ಕೆಲವುಕಡೆ ನೀತಿಯನ್ನು ಬೋಧಿಸುತ್ತವೆ. ಇನ್ನೊಂದು ಪ್ರಸಂಗದಲ್ಲಿ ಸಾಮಾಜಿಕ ಸಮಸ್ಯೆಗಳನ್ನೇ ಸಾರುತ್ತವೆ. ಮತ್ತೊಂದೆಡೆಯಲ್ಲಿ ಶಾಸ್ತ್ರದ ಪರಿಭಾಷೆ ಯನ್ನೇ ವರ್ಣಿಸುತ್ತವೆ. ಒಂದೊಂದುಕಡೆ ನಾನು ಆ ಪರತತ್ತ್ವವನ್ನು ಕಂಡೆ ಎಂಬ ಉದ್ಗಾರಗಳಿರುತ್ತವೆ. ಹೀಗೆ ಬಗೆಬಗೆಯಾಗಿರುವ ಆ ಅನುಭವಿಗಳ ಜೀವನರಂಗದ ಪೂರ್ಣಚಿತ್ರವನ್ನು ವಾಚಕರು ವಿಶದವಾಗಿ ಅನುಸಂಧಾನಮಾಡಬೇಕಾದರೆ ಈ ಮೇಲೆ ಹೇಳಿದ ಐದು ಮೆಟ್ಟಲು ಗಳನ್ನಿಟ್ಟುಕೊಂಡರೆ ಆ ಅಗಾಧವಾದ ಭಾವಗಳು ಸ್ವಲ್ಪ ಹಿತವಾಗಿ ತಿಳಿಯುತ್ತದೆಂದು ಆಶಿಸುತ್ತೇನೆ.

## ೭. ಶಿವ ಸ್ತೋತ್ರಾವಳಿ

ಕಾಶ್ಮೀರದ ಉತ್ಪಲದೇವಾಚಾರ್ಯರ ಶಿವಸ್ತೋತ್ರಾವಳಿಯು ಸಾಹಿತ್ಯಾಲಂಕಾರಗಳಿಂದ ಕೂಡಿದ್ದಾಗಿಯೂ ಚಿತ್ತಾಕರ್ಷಣೆಮಾಡಿ ಆನಂದವನ್ನುಂಟುಮಾಡುವುದಾಗಿಯೂ ಮೇಲಾಗಿ ಆಧ್ಯಾತ್ಮಸ್ಫೂರ್ತಿದಾಯಕವಾಗಿಯೂ ಇರುವುದರಿಂದ ಕೆಲವು ಶಿವಸ್ತೋತ್ರಗಳನ್ನು ಕನ್ನಡ ಅನುವಾದದೊಂದಿಗೆ ಇಲ್ಲಿ ಕೊಟ್ಟಿದೆ. ಲಲ್ಲಯೋಗೀಶ್ವರಿಯು ಅನುಸರಿಸಿದ ಯೋಗಮಾರ್ಗವನ್ನು ಈ ಸ್ತೋತ್ರಗಳಲ್ಲಿ ಕಾಣಬಹುದು. ದಾರ್ಶನಿಕ ದೃಷ್ಟಿಯಿಂದಲೂ ಇವುಗಳಿಗೆ ಯೋಗ್ಯಸ್ಥಾನವಿದೆ. ಇಲ್ಲಿ ಒಂದು ರೀತಿಯಾದ ಅನುಭಾವದರ್ಶನವನ್ನು ಕಾಣಬಹುದು.

೧ ಸಾಕ್ಷಾತ್ ಭವನ್ಮಯೆನಾಥ ಸರ್ವಸ್ಮಿನ್ಭುವನಾಂತರೆ |
ಕಿಂ ನ ಭಕ್ತಿಮತಾಂಕ್ಷೇತ್ರಂ ಮಂತ್ರಃ ಕ್ವೈಷಾಂನ ಸಿದ್ಧ್ಯತಿ ||

ಪರಮಾತ್ಮನೆ, ಈ ವಿಶ್ವವೆಲ್ಲಾ ನಿನ್ನ ರೂಪೇ ಆಗಿರುವಾಗ ಯಾವ ಸ್ಥಳವು ನಿನ್ನ ಭಕ್ತರಿಗೆ ದೇವಾಲಯವಾಗುವುದಿಲ್ಲ. ಯಾವಸ್ಥಳದಲ್ಲಿ ನಿನ್ನ ಭಕ್ತರುಚ್ಚರಿಸಿದ ಮಂತ್ರವು ಫಲಿಸುವುದಿಲ್ಲ; ಸಿದ್ಧಿಸುವುದಿಲ್ಲ !

೨ ಮಂಗಲಾಯ ಪವಿತ್ರಾಯ ನಿಧಯೆ ಭೂಷಣಾತ್ಮನೆ
ಪ್ರಿಯಾಯ ಪರಮಾರ್ಥಾಯ ಸರ್ವೋತ್ಕೃಷ್ಟಾಯತೆ ನಮಃ |

ಮಂಗಲಮೂರ್ತಿಯಾದ ಪವಿತ್ರವಾದ ಭಕ್ತರಿಗೆ ನಿಧಿಯಾದ ಸುಂದರನಾದ ಪ್ರಿಯನಾದ ಸರ್ವಸ್ವರೂಪಿಯಾದ ಶಂಭುವಿಗೆ ನಮಸ್ಕಾರವು.

೩ ತ್ವಯಿರಾಗ ರಸೇನಾಥ ನಮಗ್ನಂಹೃದಯಂಪ್ರಭೋ
ಯೇಷಾಂ ಅಹೃದಯಾಯೇವ ತೇಽವಜ್ಞಾಸ್ಪದಮೀದೃಶಾಃ ||

ಓ ಪರಮಾತ್ಮನೇ ಪ್ರೇಮರಸವೇ ನೀನಾಗಿರಲು ಯಾರ ಹೃದಯವು ನಿನ್ನ ಆ ಪ್ರೇಮರಸದಲ್ಲಿ ಮುಳುಗುವುದಿಲ್ಲವೋ ಅಂತಹವರು ಹೃದಯವಿಲ್ಲದವರು. ಅವಜ್ಞರು.

೪ ನಾಥವಿದ್ಯುದಿವಭಾತಿ ವಿಭಾತೆ | ಯಾಕದಾಚನ ಮಮಾಮೃತ ದಿಗ್ಧಾ |
ಸಾಯದಿಸ್ಥಿರತರೈವ ಭವೇತ್ತತ್ | ಪೂಜಿತೋಽಸಿವಿಧಿವತ್ ಕಿಮುತಾನ್ಯತ್ ||

ಓ ಪರಮಾತ್ಮನೆ ನಿನ್ನ ಪ್ರಕಾಶವು ಮಿಂಚಿನಂತೆ ಕದಾಚಿತ್ ಹೊಳೆಯು ವುದರ ಮೂಲಕ ನನ್ನನ್ನು ಅಮೃತದಲ್ಲಿ ತೋಯಿಸಿ ಅಲ್ಲಿ ಸ್ಥಿರವಾಗಿರಿಸು ವುದಾದರೆ ನಾನು ನಿನ್ನನ್ನು ವಿಧ್ಯುಕ್ತವಾಗಿ ಪೂಜಿಸಿದ್ದೇನೆಂದು ಭಾವಿಸು ತ್ತೇನೆ. ಇದಕ್ಕಿಂತಲೂ ಹೆಚ್ಚಿಗೆ ನನಗಿನ್ನೇನು ಆಗಬೇಕು.

೫ ಅಂತರ್ಭಕ್ತಿ ಚಮತ್ಕಾರ ಚರ್ವಣಾ ಮೀಳಿತೇಕ್ಷಣಃ |
ನಮೋಮಹ್ಯಂಶಿವಾಯೇತಿ ಪೂಜಯರ್ಯಸ್ಯಾಂ ತೃಣಾನ್ಯಪಿ ॥ ೫ ॥

ಇದು ವಿಶ್ವಾಕಾರಾನುಸಂಧಾನ–ಅಂತರ್ಭಕ್ತಿಯ ಚಮತ್ಕಾರ.

ಎಲ್ಲವೂ ಶಿವಸ್ವರೂಪವೆಂಬ ಭಾವನೆಯಿಂದ ಹುಲ್ಲನ್ನಾದರೂ ಪೂಜಿಸುತ್ತೇನೆ. ತಾನೇ ಶಿವನೆಂಬ ಭಾವನೆಯಿಂದಲೂ ವಿಶ್ವವೂ ಶಿವ ಮಯವೆಂಬ ಜ್ಞಾನದಿಂದಲೂ ಪೂಜಿಸುತ್ತೇನೆ.

೬ ಕ್ಷಣಮಾತ್ರ ಮಪೀಶಾನ ವಿಯುಕ್ತಸ್ಯತ್ವಯಾಮಮ |
ನಿಬಿಡಂ ತಪ್ಯಮಾನಸ್ಯ ಸದಾಭೂಯಾದ್ದೃಶಃ ಪದಮ್ ॥ ೬ ॥

ಪರಮಾತ್ಮನೆ ಕ್ಷಣಮಾತ್ರವಾದರೂ ನಿನ್ನನ್ನು ಅಗಲುವುದರಿಂದ ಆಗುವ ನನ್ನ ಮನಸ್ಸಿನ ತಾಪವನ್ನು ಸಹಿಸಲಾರೆನು. ಆದುದರಿಂದ ನೀನು ಯಾವಾಗಲೂ ನನ್ನ ದೃಷ್ಟಿಗೆ ಗೋಚರಿಸುತ್ತಲಿರು. ನಿನ್ನ ಸ್ಮರಣೆಯು ಯಾವಾಗಲೂ ಇರಲಿ.

೭ ಸಹಸೈವಾಸಾದ್ಯಕದಾಗಾಢಮವಷ್ಟಭ್ಯಹರ್ಷವಿವಶೋಽಹಮ್ |
ತ್ವಚ್ಚರಣವರ ನಿಧಾನಂ ಸರ್ವಸ್ಯ ಪ್ರಕಟಯಿಷ್ಯಾಮಿ ॥ ೭ ॥

ಪ್ರಭುವೆ, ಯಾವಾಗ ಆದಷ್ಟು ಜಾಗ್ರತೆಯಾಗಿ ನಿನ್ನನ್ನು ಹೊಂದಿ ಬಿಗಿಯಾಗಿ ಅಪ್ಪಿಕೊಂಡು ಆನಂದದಿಂದ ವೈಮರೆತೇನು. ನಿನ್ನ ಚರಣ ಗಳ ಮಹಿಮೆಯನ್ನು ಯಾವಾಗ ಎಲ್ಲರಿಗೂ ಪ್ರಕಟಮಾಡಿಯೇನು.

೮ ನಾಥಕದಾ ಸ ತಥಾವಿಧ ಆಕ್ರಂದೋಮಮ ಸಮುಚ್ಚರೆದ್ವಾಚಿ ॥
ಯತ್ಸಮಮಂತರಮೇವ ಸ್ಫುರತಿ ಪುರಸ್ತಾವಕೀಮೂರ್ತಿಃ ॥ ೮ ॥

ಪ್ರಭುವೇ, ಯಾವಾಗ ನನ್ನವಾಕ್ಯನ್ನು ಆ ರೀತಿಯಾಗಿ ಉಚ್ಚರಿ ಸುವೆನೋ! ಯಾವ ನನ್ನ ಉಚ್ಚಾರಣೆಯನ್ನು ಕೇಳಿದ ಒಡನೆಯೇ ನಿನ್ನ ಆಕಾರವು ನನ್ನ ಮುಂದೆ ಸ್ಫುರಿಸೀತೋ !

ಯಾವಾಗ ನಾನು ನಿನ್ನನ್ನು ಕರೆದರೆ ಆಗ ನಿನ್ನ ಆಕಾರವು ನನ್ನ ಮುಂದೆ ಪ್ರತ್ಯಕ್ಷವಾದೀತೋ, ಆ ರೀತಿಯಾದ ಉದ್ಗಾರವು ನನ್ನ ವಾಕ್ಕಿನಿಂದ ಹೊರಟೀತೋ !

೯ ಸಂಗ್ರಹೇಣ ಸುಖದುಃಖ ಲಕ್ಷಣಂ
ಮಾಂಪ್ರತಿಸ್ಥಿತಮಿದಂ ಶೃಣು ಪ್ರಭೋ ।
ಸೌಖ್ಯಮೇವ ಭವತಾಸಮಾಗಮಃ
ಸ್ವಾಮಿ ಸಾ ವಿರಹ ಏವ ದುಃಖಿತಾ ॥ ೯ ॥

ಪ್ರಭುವೇ, ಕೇಳು ಸಂಗ್ರಹವಾಗಿ ಹೇಳುವುದಾದರೆ ಇದೇ ಸುಖ ದುಃಖದ ಲಕ್ಷಣ. ನಿನ್ನೊಂದಿಗಿರತಕ್ಕದ್ದೇಸುಖ. ನಿನ್ನನ್ನಗಲುವಿಕೆಯೇ ದುಃಖ.

೧೦ ತಾವಕೆವಪುಷಿವಿಶ್ವನಿರ್ಭರೆ
ಚಿತ್ಸುಧಾರಸಮಯೆ ನಿರತ್ಯಯೆ ।
ತಿಷ್ಠತಸ್ಸತತಂ ಅರ್ಚತಃಪ್ರಭುಂ
ಜೀವಿತಂ ಮೃತಮಥಾನ್ಯದಸ್ತುಮೆ ॥ ೧೦ ॥

ವಿಶ್ವರೂಪಿಯಾದ ನಿನ್ನ ಶರೀರವು ಚಿದಾನಂದ ರಸಮಯವಾಗಿ ಅನಂತವಾಗಿರುವ ಪ್ರಭುವನ್ನು ಯಾವಾಗಲೂ ಪೂಜಿಸುತ್ತಾ ಇರುವ ನನಗೆ ಜೀವಿತವಾದರೂ ಇರಲಿ, ಮರಣವಾದರೂ ಆಗಲಿ, ಇನ್ನೇನಾದರೂ ಆಗಲಿ, ತೊಂದರೆಯಿಲ್ಲ. ನಿನ್ನ ಪೂಜೆಯೊಂದಿದ್ದರೆ ಸಾಕು.

೧೧ ಅಶೇಷಪೂಜಾ ಸತ್ಕೋಶೆ ತ್ವತ್ಪೂಜಾಕರ್ಮಣಿಪ್ರಭೋ ।
ಅಹೋ ಕರಣವೃಂದಸ್ಯ ಕಾಪಿಲಕ್ಷ್ಮೀರ್ವಿಜೃಂಭತೇ ॥ ೧೧ ॥

ಎಲ್ಲಾಪೂಜೆಗಳಿಗೂ ಆಶ್ರಯವಾಗಿರುವ ನಿನ್ನ ಪೂಜಾಕ್ರಿಯೆಗಳಲ್ಲಿ ಪ್ರಭುವೆ ಅನೇಕ ಉಪಕರಣಗಳ ಸೌಂದರ್ಯವು ಬೆಳಗುತ್ತದೆ. ಇದು ಆಶ್ಚರ್ಯ. [ಲಕ್ಷ್ಮಿ=ಸೌಂದರ್ಯ]

೧೨ ಭಕ್ತಿ ಲಕ್ಷ್ಮೀಸ ಮೃದ್ಧಾನಾಂ ಕಿಮನ್ಯಮುಪಯಾಚಿತಮ್ |
ಏತಯಾ ವಾ ದರಿದ್ರಾಣಾಂ ಕಿಮನ್ಯಮುಪಯಾಚಿತಮ್ ॥ ೧೨ ॥

ಭಕ್ತಿಯೆಂಬ ಐಶ್ವರ್ಯದಿಂದ ಸಮೃದ್ಧರಾದವರಿಗೆ ಬೇರೆ ಬೇಡತಕ್ಕದ್ದೇನಿರುತ್ತದೆ. ಭಕ್ತಿದಾರಿದ್ರ್ಯವುಳ್ಳವರು ಯಾಚಿಸತಕ್ಕದ್ದೇನಿದೆ?

ಎಲ್ಲಾ ನಿನ್ನಲ್ಲಿಯೇ ಇದೆ. ನಿನ್ನಲ್ಲಿರುವುದನ್ನು ನಿನಗೆ ಕೊಡುವುದರಲ್ಲಿ ಆಶ್ಚರ್ಯವೇನು?

೧೩ ದುಃಖಾನ್ಯಪಿಸುಖಾಯಂತೆ ವಿಷಮಪ್ಯಮೃತಾಯತೆ |
ಮೋಕ್ಷಾಯತೇ ಚ ಸಂಸಾರೋಯತ್ರಮಾರ್ಗಃ ಸ ಶಾಂಕರಃ ॥ ೧೩ ॥

ಶಾಂಕರಮಾರ್ಗವನ್ನನುಸರಿಸುವವರಿಗೆ ವಿಷವೆಲ್ಲಾ ಅಮೃತವಾಗುತ್ತದೆ. ದುಃಖವೆಲ್ಲಾ ಸುಖವಾಗಿ ಪರಿಣಮಿಸುತ್ತದೆ.

# ೮. ಅನುಬಂಧ

## ಅನುಭವ

ಸಾಧಕನು ಅನುಭವಸಿದ್ಧನಾಗುವವರೆಗೆ ವಿಚಾರ ವಿಮರ್ಶೆ ಅತ್ಯವಶ್ಯಕ. ಎಷ್ಟು ಗ್ರಂಥಾಧ್ಯಯನ ಮಾಡಿದರೂ ಅನುಭವವಿಲ್ಲದಿದ್ದರೆ ತತ್ತ್ವದ ಪರಿಚಯವಾಗುವುದಿಲ್ಲ. ತರ್ಕವಿಚಾರದಿಂದ ಬರುವ ತಿಳಿವಳಿಕೆಗಿಂತ ಅನುಭವದಿಂದ ಹೊರಹೊಮ್ಮುವ ಮಾರ್ಗ ಸುಗಮ ಮತ್ತು ಸರಳ. ಏನೆ ಆಗಲಿ ತಮ್ಮ ಗುರಿಯನ್ನು ಸಾಧಿಸಬೇಕೆಂಬ ದೃಢ ನಿಶ್ಚಯದಿಂದ ಮುಂದುವರಿಯುವಾಗ ನಮಗೆ ಆದರ್ಶಗಳು ಬೇಕು. ಆದರ್ಶಜೀವಿಗಳ (ಅನುಭಾವಿಗಳ) ಸಾಹಸ ನಮಗೆ ದೃಷ್ಟಾಂತವಾಗಿರುತ್ತದೆ. ಅವರ ಸಮನ್ವಯ ಸ್ಫೂರ್ತಿ ನಮಗೆ ಪ್ರಚೋದಕವಾಗುತ್ತದೆ. ಅವರ ಕರ್ತವ್ಯನಿಷ್ಠೆ ನಮಗೆ ಧೈರ್ಯವನ್ನು ತುಂಬುತ್ತದೆ. ಮೇಲಾಗಿ ಅಂತಹ ಪವಿತ್ರ ವ್ಯಕ್ತಿಗಳ (ಅನುಭಾವಿಗಳ) ಸ್ಮರಣೆಯು ನಮ್ಮ ಭಾವನಾ ಪ್ರಪಂಚವನ್ನು ನಿರ್ಮಲವಾಗಿಡುತ್ತದೆ.

ಸಾಧನ ಪ್ರಯತ್ನಗಳು ಭಾವನಾಮಯವಾಗಿ ನಿಂತರೆ ಅನುಭವ. ಈ ರೀತಿ ನಾವು ಯಾವ ಮತಧರ್ಮವನ್ನಾದರೂ ವಿಮರ್ಶೆ ಮಾಡುತ್ತಾ ಹೋದರೆ ತತ್ತ್ವವು ನಮಗೆ ಸುಲಭವಾಗಿ ವೇದ್ಯವಾಗುವುದು. ಲೌಕಿಕ ಪ್ರಪಂಚದಲ್ಲಿ ಜೀವನವನ್ನು ಸಾಗಿಸುವುದಕ್ಕೆ ಅಥವಾ ಸುಖವಾಗಿ ಬಾಳುವುದಕ್ಕೆ ಮಾಡುವ ಪ್ರಯತ್ನಗಳಿಂದ ದೊರೆಯುವ ಅನುಭವವಲ್ಲ. ಈ ಅನುಭವಗಳು ಬುದ್ಧಿ ಶಕ್ತಿ ಅಥವಾ ಜ್ಞಾನ ಸಾಮಗ್ರಿಯನ್ನು ಹೆಚ್ಚಿಸತಕ್ಕವುಗಳು. ಆದರೆ ಶಿವಾನುಭವವಾದರೋ ನಮ್ಮ ಸ್ವಭಾವವನ್ನು ಪರಿವರ್ತನ ಮಾಡುವಂತಹುದು. ಅದು ಒಂದು ವಿಶೇಷತರವಾದ ಜೀವನ. ಸತ್ಯವನ್ನು ಒಳಹೊಕ್ಕು ನೋಡುವ ಸೂಕ್ಷ್ಮ ಪರಿಜ್ಞಾನವನ್ನುಂಟುಮಾಡುವಂತಹುದು. ಮಹತ್ತ್ವದ ಅರಿವನ್ನು ನೇರವಾಗಿ ಮಾಡುವಂತಹುದು. ಒಂದೇ ಮಾತಿನಲ್ಲಿ ಹೇಳುವುದಾದರೆ ಅದು ಬ್ರಹ್ಮವಿಹಾರ—ಪರಮಾರ್ಥಾನುಭವ.

ಅನುಭಾವಿಗಳು ವಿಶ್ವವನ್ನೆಲ್ಲಾ ತನ್ಮಯವಾಗಿ ನೋಡುವರು,

ಪ್ರಪಂಚವೆಲ್ಲಾ ಒಂದೇ ಎನ್ನುವರು. ಅನುಭಾವಿಗಳು ಸಿದ್ಧಾವಸ್ಥೆಯಲ್ಲಿದ್ದರೂ ಪ್ರಾಪಂಚಿಕವಾದ ಮತ್ತು ಸಾಂಪ್ರದಾಯಿಕವಾದ ರೀತಿ ಮತ್ತು ನೀತಿಗಳನ್ನು ಯಾವ ದೃಷ್ಟಿಯಿಂದ ಅನುಸರಿಸಬೇಕೆಂಬುದನ್ನು ಸೂಚಿಸಿರುತ್ತಾರೆ. ಸಾಮಾಜಿಕ ಆಚಾರಗಳೂ ನೀತಿಗಳೂ ಅಕ್ಷರಶಃ ಪಾಲಿಸಲು ಸಾಧ್ಯವಿಲ್ಲದಿದ್ದರೂ ಹೊರಗಿನ ಪರಿಸ್ಥಿತಿಗಳಿಂದ ಜೀವನ ಕ್ರಮವು ಯಾವ ಆಶ್ರಮದಲ್ಲಿದ್ದರೂ ಭಾವನಾಕ್ರಮವು ಒಂದೇ ರೂಪದಲ್ಲಿರಬೇಕೆಂದು ಸಿದ್ಧಾಂತ ಮಾಡಿರುತ್ತಾರೆ. ಕೆಲವು ಮಟ್ಟಗಳಲ್ಲಿ ಮೂರ್ತಿಪೂಜೆ, ವಿಗ್ರಹಧ್ಯಾನ, ತೀರ್ಥಯಾತ್ರೆ ಮೊದಲಾದವುಗಳು ಒಂದು ಹಂತದಲ್ಲಿ ಸಹಕಾರಿಗಳಾಗಿರುತ್ತಿದ್ದರೂ ಮತ್ತೊಂದು ಹಂತದಲ್ಲಿ ಅವುಗಳು ಹೇಗೆ ಸಹಕಾರಿಗಳಲ್ಲವೆಂದು ನಿರೂಪಿಸಿರುತ್ತಾರೆ. ತಾನು ವಿಶ್ವವ್ಯಾಪಿಯಾದ ಶಿವನ ಅಂಶವೆಂದು ಶಿವನ ಸರ್ವಜ್ಞತ್ವಾದಿ ಗುಣಗಳು ಸಂಕುಚಿತವಾಗಿರುವುದೊಂದೇ ಜೀವಭಾವಕ್ಕೆ ಹೇತುವೆಂದು ಯುಕ್ತಿಯಿಂದಲೂ ಅನುಭವದಿಂದಲೂ ವಿವರಿಸಿದ್ದಾರೆ.

ಅನುಭವವೆಂದರೆ ಯಾವುದು ಹೇಗಿದೆಯೋ ಹಾಗೆ ನಿಜ ಸ್ವರೂಪವನ್ನು ತಿಳಿಯುವುದೇ ಆಗಿವೆ. ನಮ್ಮ ಬೋಧನೆಗಳು ಕೆಲವು ವೇಳೆ ನಿಜಸ್ವರೂಪಕ್ಕೆ ಬದಲಾಗಿ ಬೇರೆ ಭಾವನೆಗಳನ್ನುಂಟುಮಾಡುತ್ತವೆ. ಆದರೆ ನಿಜವಾದ ಅನುಭಾವಿಗೆ ಅಭೇದ ಭಾವನೆ ದೃಢವಾಗಿರುತ್ತದೆ. ಭೇದಭಾವನೆಗಳೆಲ್ಲಾ ವಾಗ್ವಿಲಾಸ ಮಾತ್ರ. ಇದು ಆಂತರೀಯವಾಗಿ ಗ್ರಹಿಸತಕ್ಕ ಅಂಶವಾಗಿದೆ. ಬಾಹ್ಯವೃತ್ತಿಯಲ್ಲಿ ಸಾಮ್ಯವನ್ನೂ ಅಭೇದವನ್ನೂ ಕಾಣುವುದು ಸಾಧುವಾದದ್ದು. ಪೂರ್ಣವಾಗಿ ಅಭೇದ ವ್ಯಾಪ್ತಿಯನ್ನು ತರುವುದು ಅಸಾಧ್ಯವಾಗಿರುವುದರಿಂದ ಸಾಧ್ಯವಾದಷ್ಟು ಅಂಶಗಳಲ್ಲಿ ಸಾಮ್ಯವನ್ನು ಕಾಣುವುದು, ಬೋಧಿಸುವುದು, ಆಚರಿಸುವುದು ಮುಖ್ಯವಾದವುಗಳಾಗಿರುತ್ತವೆ. ಆದುದರಿಂದ ಅನುಭಾವಿಗಳು ಆರೋಹಣಾವಸ್ಥೆಯಲ್ಲಿ ಬಾಹ್ಯ ವ್ಯವಹಾರವನ್ನು ಗಮನಿಸಿ ನೀತಿಗಳನ್ನು ಬೋಧಿಸುತ್ತಾರೆ. ಆಂತರ್ಯ ವಿಕಾಸದಿಂದ ಪರಿಪೂರ್ಣ ಬ್ರಹ್ಮಾನುಭವ ಏರ್ಪಟ್ಟಮೇಲೆ ಅಭೇದ ಭಾವನೆ ತಾನಾಗಿಯೇ ವ್ಯಕ್ತವಾಗುತ್ತದೆ.

ಅನುಭಾವಿಯು ಪೂರ್ಣ ಬ್ರಹ್ಮಾನುಭವವನ್ನು ಅಂಗೀಕರಿಸಿದರೂ

ಬಾಹ್ಯವೃತ್ತಿಯಲ್ಲಿ ವಾಕ್ಕಿನ ಮೂಲಕ ಹೇಳುವಾಗ ಅದನ್ನು ಪೂರ್ಣವಾಗಿ ವಿವರಿಸುವುದಕ್ಕಾಗುವುದಿಲ್ಲ. ಅನುಭಾವಿಯು ತನ್ನ ಹಿಂದಿನ ಸಂಸ್ಕಾರ ಆಗಿನ ಪ್ರಯೋಗಗಳು ಮತ್ತು ಜನ ಮನೋಭಾವನೆಗಳನ್ನನುಸರಿಸಿ ತನ್ನ ಅನುಭವವನ್ನು ತಿಳಿಯಪಡಿಸುತ್ತಾನೆ. ಆತನ ಉಪದೇಶಗಳು ಆಯಾ ಕಾಲ, ದೇಶ ಸಂಪ್ರದಾಯಗಳಿಗೆ ಕಟ್ಟುಬಿದ್ದು ಹೊರಬೀಳುತ್ತವೆ. ಜನ ಜೀವನವನ್ನು ನಯವಾಗಿ ಮಾರ್ಪಡಿಸಬೇಕೆನ್ನುವಾಗ ನೀತಿಯನ್ನು ಮುಖ್ಯಸಾಧನವನ್ನಾಗಿ ಹೇಳುತ್ತಾನೆ. ನೀತಿವಂತನಾದವನು ಆಂತರ್ಯ ವಿಕಾಸಕ್ಕೆ ತೊಡಗಬೇಕಾದರೆ ಸಾಧನಾಭ್ಯಾಸಗಳನ್ನು ವಿವರಿಸುತ್ತಾನೆ. ಅಭೇದ ವ್ಯಾಪ್ತಿಯನ್ನು ಮಂಡಿಸುತ್ತಾನೆ. ಆಗ ಹೆಚ್ಚು-ಕಡಿಮೆ, ನಾನು –ನೀನು ಎಂಬುವುದು ಆಂತರ್ಯ ವಿಕಾಸದಲ್ಲಿ ನಿಲ್ಲುವುದಿಲ್ಲ. ಕಾಶ್ಮೀರ ಸಂಪ್ರದಾಯದ ಒಂದು ಶ್ಲೋಕವನ್ನು ಇಲ್ಲಿ ಸ್ಮರಿಸಬಹುದು.

ಉಚ್ಚಾರ ರಹಿತಂ ವಸ್ತು ಚೈತಸ್ಯೈವ ವಿಚಿಂತಯನ್।
ಯೋಸಮಾವೇಶಮಾಪ್ನೋತಿ ಶಾಕ್ತ ಸ್ಸೋತ್ರಾಭಿಧೀಯತೆ॥

ಯಾವ ಸ್ಥಿತಿಯನ್ನು ಅಕ್ಷರಗಳಿಂದ ಉಚ್ಚರಿಸಲು ಸಾಧ್ಯವಿಲ್ಲವೋ ಯಾವುದನ್ನು ಇಚ್ಛಾಶಕ್ತಿಯಿಂದ ಅನುಭವಿಸಬಹುದೋ ಆ ಸ್ಥಿತಿಯನ್ನು ಯಾವನು ಮುಟ್ಟಿರುವನೋ ಅವನೇ ನಿಜವಾದ ಅನುಭವಿ.

'ಅನುಸೃತ್ಯ ಭವತೀತಿ ಅನುಭವಃ'

ಇದು ಚಿತ್ಸ್ವರೂಪ, ಇದನ್ನು ಅನುಸರಿಸಿ ಉಂಟಾಗುತ್ತಿರುವುದು ಚಿದನುಭವ, ಈ ಸ್ಥಿತಿಯನ್ನು ಪಡೆದಿರುವವನು ಅನುಭವಿ.

ಎಲ್ಲಾ ಶೈವ ಪ್ರಭೇದಗಳಲ್ಲಿಯೂ ಅನುಭವಿಗೆ ವಿಶೇಷ ಸ್ಥಾನವಿದೆ. ಯಾವುದು ಹೃದಯಗೋಚರವೋ ಯಾವುದು ಅನುಭವ ವೇದ್ಯವೋ ಅದೇ ಸತ್ಯವೆಂಬುದು ಅನುಭವಿಗಳ ಮತ. ವೇದಶಾಸ್ತ್ರ ಪುರಾಣಗಳಲ್ಲಿ ಹೇಳಿದ ಮಾತುಗಳು ತನ್ನ ಜೀವನದಲ್ಲಿ ಅನುಭವಕ್ಕೆ ಬಂದಾಗ ಮಾತ್ರ ಸತ್ಯ ಎಂಬುದೇ ಇವರ ಮತ, ಇವರು ತಮ್ಮ ಉದ್ಗಾರಗಳನ್ನು ದೇಶ ಭಾಷೆಗಳಲ್ಲಿ ಸಮಯೋಚಿತವಾಗಿ ವ್ಯಕ್ತಪಡಿಸಿದ್ದಾರೆ. ಈ ಉದ್ಗಾರಗಳು ಹಾಡುಗಳ ರೂಪವಾಗಿಯೂ ವಚನಗಳ ರೂಪವಾಗಿಯೂ ಹೊರಬಿದ್ದಿವೆ.

ಶ್ರೀಮದಭಿನವ ಗುಪ್ತಾಚಾರ್ಯ ವಿರಚಿತ
'ಅಭಿನವನಿವೇದನಂ'

ಎಂಬ ಸ್ತೋತ್ರವು ಸಾಧಕನು ಯಾವಾಗಲೂ ಪರತತ್ತ್ವವನು ಸಂಧಾನ ಮಾಡಬೇಕಾದ ಕ್ರಮವನ್ನು ಸೂಚಿಸುತ್ತದೆ—

ಅಂತರ್ಲಕ್ಷ್ಯ ವಿಲೀನಚಿತ್ತ ಪವನೋ ಯೋಗೀ ಯದಾವರ್ತತೆ
ದೃಷ್ಟ್ಯಾ ನಿಶ್ಚಲತಾರಯಾ ಬಹಿರಸೌ ಪಶ್ಯನ್ನಪಶ್ಯನ್ನಪಿ |
ಮುದ್ರೇಯಂಖಲು ಶಾಂಭವೀ ಭವತಿ ಸಾ ಯುಷ್ಮತ್ಪ್ರಸಾದಾದ್ಗುರೋ
ಶೂನ್ಯಾ ಶೂನ್ಯ ವಿವರ್ಜಿತಂ ಭವತಿ ಯತ್ತತ್ತ್ವಂ ಪದಂ ಶಾಂಭವಂ ||೧||

ಅರ್ಧೋದ್ಘಾಟಿತ ಲೋಚನಃ ಸ್ಥಿರಮನಾನಾಸಾಗ್ರದತ್ತೇಕ್ಷಣ
ಶ್ಚಂದ್ರಾರ್ಕಾವಪಿ ಲೀನತಾಮುಪಗತೌ ತ್ರಿಸ್ಪಂದಭಾವಾಂತರೆ |
ಜ್ಯೋತೀರೂಪ ಮಶೇಷ ಬಾಹ್ಯರಹಿತಂ ಚೈಕಂ ಪುಮಾಂಸಂ ಪರಂ
ತತ್ತ್ವಂ ತತ್ಪದಮೇತಿ ವಸ್ತುಪರಮಂ ವಾಚ್ಯಂಕಿಮತ್ರಾಧಿಕಂ ||೨||

ಶಬ್ದಃ ಕಶ್ಚನ ಯೋ ಮುಖಾದುದಯತೇ ಮಂತ್ರಃ ಸ ಲೋಕೋತ್ತರಃ
ಸಂಸ್ಥಾನಂ ಸುಖದುಃಖ ಜನ್ಮವಪುಷೋ ಯತ್ಕಾಪಿ ಮುದ್ರೈವಸಾ |
ಪ್ರಾಣಸ್ಯ ಸ್ವರಸೇನ ಯತ್ಪ್ರವಹಣಂ ಯೋಗಃ ಸ ಏವಾದ್ಭುತಃ
ಶಾಕ್ತಂಧಾಮಪರಂ ಮಮಾನುಭವತಃ ಕಿನ್ನಾಮ ನ ಭ್ರಾಜತೇ ||೩||

ಮಂತ್ರಃಸ ಪ್ರತಿಭಾತಿ ವರ್ಣರಚನಾಯಸ್ಮಿನ್ನ ಸಂಲಕ್ಷ್ಯತೆ
ಮುದ್ರಾ ಸಾ ಸಮುದೇತಿ ಯತ್ರಗಲಿತಾ ಕೃತ್ಸ್ನಾಕ್ರಿಯಾ ಕಾಯಿಕೀ |
ಯೋಗಃಸ ಪ್ರಥತೇಯತಃ ಪ್ರವಹಣಂ ಪ್ರಾಣಸ್ಯ ಸಂಕ್ಷೀಯತೇ
ತ್ವದ್ಧಾಮಾದಿಗ ಮೋತ್ಸವೇಷು ಸುಧಿಯಾಂ ಕಿಂ ಕಿಂ ನ ನಾಮಾದ್ಭುತ:

ಅಭ್ಯಾಸ ಮಾಡುವವರಿಗೆ ಕೆಲವು ಸ್ವಾಭಾವಿಕವಾದ ಜೀವನ ಸ್ಥಿತಿಗಿಂತ ವಿಲಕ್ಷಣವಾದ ಸ್ಥಿತಿಗಳೇರ್ಪಡುತ್ತವೆ. ಅವುಗಳನ್ನು ಶಾಂಭವೀ ಮುದ್ರಾ, ತ್ರಿಸ್ಪಂದಭಾವ, ಸ್ವರಸಪ್ರವಾಹ, ಶಾಕ್ತಧಾಮ, ಪ್ರಾಣ ಸಂಕ್ಷಯ ಇಂತಹ ಹೆಸರುಗಳಿಂದ ಅನುಭವ ನಿವೇದನದಲ್ಲಿ ಸೂಚಿಸಿರುತ್ತಾರೆ.

WO 4101—MUPM—1000—28-1-67

